ಉ. ಕಾ. ಸುಬ್ಬರಾಯಾಚಾರ್, ಎಂ.ಎ.

# ಚಿತ್ರಾಂಗದಾ





ಪ್ರಚಾರ ಪುಸ್ತಕಮಾಲೆ-೬೫

ಪ್ರಸಾರಾಂಗ

ಮೈಸೂರು ವಿಶ್ವವಿದ್ಯಾನಿಲಯ

೧೯೭೦

ಪ್ರಚಾರ ಪುಸ್ತಕಮಾಲೆ—೬೫



# ಚಿತ್ರಾಂಗದಾ

ಉ. ಕಾ. ಸುಬ್ಬರಾಯಾಚಾರ್, ಎಂ.ಎ.



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೦

ಮೊದಲನೆಯ ಮುದ್ರಣ ೧೯೬೯
ಎರಡನೆಯ ಮುದ್ರಣ ೧೯೭೦
೫೦೦೦ ಪ್ರತಿಗಳು





ಸಾದಾ ಪ್ರತಿ ೩೫ ಪೈಸೆ
ಉತ್ತಮ ಪ್ರತಿ ೪೨ ಪೈಸೆ



ಪ್ರಕಾಶಕರು
ಡೈರೆಕ್ಟರ್ 'ಪ್ರಸಾರಾಂಗ'
ಮಾನಸಗಂಗೋತ್ರಿ, ಮೈಸೂರು–೬

ಮುದ್ರಕರು
ಕೆನರಾ ಪ್ರಿಂಟರ್ಸ್,
ಮಧ್ವಾಚಾರ್ ರೋಡ್, ಮೈಸೂರು–4

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೮೫ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. “ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?” ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯ

ದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡದಲ್ಲಿ ವಿಜ್ಞಾನ ಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆಯಾಗಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೫೫ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ಸಮಾಜವಿಜ್ಞಾನ, ವೈದ್ಯವಿಜ್ಞಾನ, ಗಣಿತ ವಿಜ್ಞಾನ ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೪ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ

ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವ ವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕ ಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವ ಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿ ವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತ ದೆಂದು ನಾವು ಹಾರೈಸುತ್ತೇವೆ.

ಮೈಸೂರು
೫-೧-೫೯

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್

## ವಿಷಯಾನುಕ್ರಮಣಿಕೆ

# ಚಿತ್ರಾಂಗದಾ

## ೧. ಕಾವ್ಯವಸ್ತು

**ಮಹಾಭಾರತ :** ಚಿತ್ರಾಂಗದಾ ಕಾವ್ಯವಸ್ತು ಪ್ರಪ್ರಥಮವಾಗಿ ಕಾಣುವುದು ವ್ಯಾಸ ವಿರಚಿತ ಮಹಾಭಾರತದಲ್ಲಿ. ಪಾಂಡವರು ದ್ರೌಪದಿಯನ್ನು ಮದುವೆಯಾಗಿ ಇಂದ್ರಪ್ರಸ್ಥದಲ್ಲಿ ನೆಲಸಿದಾಗ ನಾರದರು ಬಂದು ಸುಂದೋಪಸುಂದರು ತಿಲೋತ್ತಮೆಗಾಗಿ ಕಾದಿ ಮಡಿದ ಕಥೆಯನ್ನು ಜ್ಞಾಪಿಸಿ, ಪಾಂಡವರಲ್ಲಿ ಒಬ್ಬೊಬ್ಬನೂ ದ್ರೌಪದಿಯೊಡನೆ ಒಂದೊಂದು ವರ್ಷ ಕಾಲ ಇರುವುದು ಉತ್ತಮವೆಂದೂ ಯಾರಾದರೂ ದ್ರೌಪದಿಯೊಡನೆ ಮತ್ತೊಬ್ಬರು ಏಕಾಂತದಲ್ಲಿರುವುದನ್ನು ಕಂಡರೆ ಒಂದು ವರ್ಷ ಕಾಲ ಬ್ರಹ್ಮಚರ್ಯ ವ್ರತದಲ್ಲಿ ಅರಣ್ಯದಲ್ಲಿ ಸಂಚರಿಸಬೇಕೆಂದೂ ನಿಯಮಿಸಿದರು.

ಪಾಂಡವರು ನಾರದರ ಹಿತವಚನದಂತೆಯೆ ನಡೆದುಕೊಳ್ಳುತ್ತಿದ್ದರು. ಒಂದುದಿನ ಬ್ರಾಹ್ಮಣನೊಬ್ಬನು ತನ್ನ ಹಸುಗಳನ್ನು ಕಳ್ಳರು ಅಪಹರಿಸಿಕೊಂಡು ಹೋದುದನ್ನು ಅರ್ಜುನನಿಗೆ ತಿಳಿಸಿದನು. ಆಯುಧಗಳನ್ನು ತರಲುಹೋದ ಅರ್ಜುನನು ಧರ್ಮರಾಯ ದ್ರೌಪದಿಯರು ಏಕಾಂತದಲ್ಲಿದ್ದುದನ್ನು ಕಂಡನು. ಕಳ್ಳರನ್ನು ಹಿಂಬಾಲಿಸಿ ಬ್ರಾಹ್ಮಣನ ಗೋವುಗಳನ್ನು ಹಿಂತಿರುಗಿಸಿ ವ್ರತನಿಯಮದಂತೆ ಅರ್ಜುನನು ಅರಣ್ಯಕ್ಕೆ ಹೊರಟನು. ದಾರಿಯಲ್ಲಿದ್ದ ಗಂಗಾನದಿಯಲ್ಲಿ ಸ್ನಾನಕ್ಕಾಗಿ ಇಳಿದಾಗ ಇವನನ್ನು ಬಯಸಿದವಳು ಉಲೂಪಿಯೆಂಬ ನಾಗಕನ್ನಿಕೆ. ಒಪ್ಪಲಾರದೆ ಅವಳನ್ನು ಒಪ್ಪಿ ನಾಗಲೋಕಕ್ಕೆ ಹೋಗಿ ಅವಳಿಂದ ಇರಾವಂತ

ನೆಂಬ ಮಗನನ್ನು ಪಡೆದನು. ಅವನ ಯಾತ್ರೆ ಮುಂದುವರಿ ಯಿತು. ಮಣಲೂರಿನ ರಾಜ ಚಿತ್ರವಾಹನನ ಮಗಳು ಚಿತ್ರಾಂಗಿ ಯನ್ನು ಮೋಹಿಸಿ ಅವಳಿಂದ ಪಡೆದ ಪುತ್ರ ಸಂತಾನವನ್ನು ಚಿತ್ರವಾಹನನಿಗೆ ಒಪ್ಪಿಸುವುದಾಗಿ ಮಾತುಕೊಟ್ಟು ಅವಳನ್ನು ಮದುವೆಯಾದನು. ತೀರ್ಥಯಾತ್ರೆಯನ್ನು ಮುಂದುವರಿಸಿ ಹಿಂತಿರುಗಿ ಬರುವಾಗ ಚಿತ್ರಾಂಗದೆಗೆ ಬಭ್ರುವಾಹನನು ಮಗ ನಾಗಿ ಜನಿಸಿದ್ದನು. ಮಾತಿನಂತೆ ಮಗನನ್ನು ಚಿತ್ರವಾಹನನಿಗೆ ಒಪ್ಪಿಸಿ ಚಿತ್ರಾಂಗದೆಯನ್ನು ಇಂದ್ರಪ್ರಸ್ಥಕ್ಕೆ ಕರೆಸಿಕೊಳ್ಳುವ ಭರವಸೆ ಕೊಟ್ಟು ಮಗನನ್ನು ಸಂತೈಸಿ ಗೋಕರ್ಣ ಕ್ಷೇತ್ರಕ್ಕೆ ಹೊರಟನು.

ಮುಂದೆ ರಾಜಸೂಯ ಯಾಗದ ಸಂದರ್ಭದಲ್ಲಿ ಮೈದುನ ನಾದ ಸಹದೇವನನ್ನು ಚಿತ್ರಾಂಗದೆ ಗೌರವಿಸಿ ಆದರಿಸುವ ಸನ್ನಿ ವೇಶ ಬರುತ್ತದೆ. ಸಹದೇವನು ಅಣ್ಣನ ಮಗನಾದ ಬಭ್ರುವಾಹನ ನಿಗೆ ಬಹು ವಿಧವಾದ ರತ್ನಗಳನ್ನು ಕೊಟ್ಟು ಪ್ರೀತಿಯನ್ನು ವ್ಯಕ್ತ ಪಡಿಸಿದನು.

ಕುರುಕ್ಷೇತ್ರದ ಕದನ ಮುಗಿದು ವಿಜಯಿಗಳಾದ ಪಾಂಡವರು ಅಶ್ವಮೇಧಕ್ಕಾಗಿ ಕುದುರೆಯನ್ನು ಬಿಟ್ಟರು. ಕುದುರೆಯ ರಕ್ಷಣೆ ಗಾಗಿ ಅರ್ಜುನನೆ ಹೊರಟನು. ಕುದುರೆ ಮಣಲೂರಿಗೆ ಬಂದಾಗ ಬಭ್ರುವಾಹನನು ತಂದೆಯೆಂಬ ಗೌರವದಿಂದ ಅರ್ಜು ನನಿಗೆ ನಮಸ್ಕರಿಸಿದನು. ಕುದುರೆಯನ್ನು ಕಟ್ಟಿ ಸಾಮರ್ಥ್ಯ ತೋರದೆ ದೈನ್ಯತೆಯನ್ನು ತೋರಿದುದಕ್ಕಾಗಿ ಅರ್ಜುನನು ಬಭ್ರು ವಾಹನನನ್ನು ನಿಂದಿಸಿದನು. ಅವನು ಮಗನೆಂಬುದು ಅರ್ಜುನ ನಿಗೆ ಮರೆತುಹೋಗಿತ್ತೆಂದು ಕಾಣುತ್ತದೆ

ಬಭ್ರುವಾಹನನ ಮನಸ್ಸು ಕಲಕಿಹೋಯಿತು ಅದೇ ಸಮಯ

ದಲ್ಲಿ ಪಾತಾಳದಲ್ಲಿದ್ದ ಉಲೂಪಿ ಬಂದು ಯುದ್ಧ ಮಾಡ ಬೇಕೆಂದು ಅವನಿಗೆ ಪ್ರೋತ್ಸಾಹವಿತ್ತಳು. ಘೋರ ಯುದ್ಧ ನಡೆದು ಅರ್ಜುನನು ಹತನಾದನು. ತಂದೆಯ ಸ್ಥಿತಿಯನ್ನು ಕಂಡು ಮಗನು ಮೂರ್ಛೆಹೋದನು. ಅರಮನೆಯಲ್ಲಿದ್ದ ಚಿತ್ರಾಂಗದೆ ಈ ಸುದ್ದಿಯನ್ನು ಕೇಳಿ ರಣಭೂಮಿಗೆ ಬಂದಳು. ಅಲ್ಲಿಯ ಹೃದಯವಿದ್ರಾವಕ ದೃಶ್ಯವನ್ನು ಕಂಡು ತಾನೂ ಸಾಯ ಬೇಕೆಂದು ನಿರ್ಧರಿಸಿದಳು. ಆಗ ನಾಗಲೋಕದಿಂದ ಸಂಜೀವನ ರತ್ನವನ್ನು ತರಿಸಿದಳು ಉಲೂಪಿ. ಬಭ್ರುವಾಹನನು ಆ ರತ್ನ ದಿಂದ ತಂದೆಯ ಎದೆಯನ್ನು ಸ್ಪರ್ಶಿಸಿದೊಡನೆ ಅರ್ಜುನನಿಗೆ ಹೋದ ಜೀವ ಮತ್ತೆ ಬಂತು. ಪ್ರಾಣ ಬಂದ ಮೇಲೆ ಅರ್ಜುನನು ಮಗನನ್ನು ಪ್ರೀತಿಯಿಂದ ಆಲಂಗಿಸಿದನು.

ಆ ಸಮಯದಲ್ಲಿ ಯುದ್ಧಕ್ಕೆ ಕಾರಣವನ್ನು ತಿಳಿಸಿದಳು ಉಲೂಪಿ ಕುರುಕ್ಷೇತ್ರ ಕದನದಲ್ಲಿ ಶಿಖಂಡಿಯನ್ನು ಮುಂದಿಟ್ಟು ಭೀಷ್ಮನನ್ನು ಕೊಂದ ಪಾಪಕ್ಕಾಗಿ ಗಂಗೆಯೂ ವಸುಗಳೂ ಅರ್ಜುನನನ್ನು ಶಪಿಸಿದ್ದರು. ಆ ಶಾಪ ವಿಮೋಚನೆಗಾಗಿ ಉಲೂಪಿಯ ತಂದೆ ಬೇಡಿದಾಗ "ಮಗನಿಂದ ಮುಂದೆ ಅರ್ಜುನನು ಹತನಾದಾಗ" ಆ ಶಾಪವಿಮೋಚನೆಯಾಗುವುದೆಂದು ಅಭಯ ದೊರಕಿತ್ತು. ಈ ಕಾರಣದಿಂದಲೆ ಬಭ್ರುವಾಹನನನ್ನು ಅರ್ಜುನ ನೊಡನೆ ಕಾದಾಡಲು ಪ್ರೇರೇಪಿಸಿದ್ದು ಎಂದು ಹೇಳಿದಳು ಉಲೂಪಿ

ತಾಯಂದಿರಿಬ್ಬರೊಡನೆ ಯಜ್ಞಕ್ಕೆ ಬರಬೇಕೆಂದು ಮಗ ನನ್ನು ಆಹ್ವಾನಿಸಿ ಅವರೆಲ್ಲರ ಪ್ರೇಮಾತಿಥ್ಯವನ್ನು ಸ್ವೀಕರಿಸಿ ಕುದುರೆಯನ್ನು ಹಿಂಬಾಲಿಸಿ ಅರ್ಜುನ ಮುಂದೆ ಹೊರಟನು. ಯಜ್ಞ ಸಮಾರಂಭಕ್ಕೆ ಬಂದ ಈ ಮೂವರನ್ನೂ ಪಾಂಡವರು

ಪ್ರೀತಿಯಿಂದ ಸತ್ಕರಿಸಿದರು. ಬಭ್ರುವಾಹನನಿಗೆ ಒಂದು ಬೆಳ್ಳಿಯ ರಥ ಉಡುಗೊರೆಯಾಗಿ ಬಂತು ಶ್ರೀಕೃಷ್ಣನಿಂದ. ಯಜ್ಞಕಾರ್ಯ ಸಾಂಗವಾಗಿ ಮುಗಿದ ಮೇಲೆ ಬಭ್ರುವಾಹನ ಮಣಲೂರಿಗೆ ಹಿಂತಿರುಗಿದನು. ಇದೇ ಮೂರನೆಯ ಸಾರಿ ನಾವು ಚಿತ್ರಾಂಗದೆ ಯನ್ನು ಮಹಾಭಾರತದಲ್ಲಿ ಕಾಣುವುದು.

ಕಡೆಯ ಬಾರಿ ಮಹಾಪ್ರಸ್ಥಾನ ಪರ್ವದಲ್ಲಿ ಪಾಂಡವ ರೆಲ್ಲರೂ ಹಿಮಾಲಯಕ್ಕೆ ಹೊರಟಾಗ ಚಿತ್ರಾಂಗದೆ ಮಣ ಲೂರಿಗೆ ಹಿಂತಿರುಗುತ್ತಾಳೆ. ಚಿತ್ರಾಂಗದೆಯ ಪ್ರಸಂಗ ಅಲ್ಲಿಗೆ ಮುಗಿಯುತ್ತದೆ ಮಹಾಭಾರತದಲ್ಲಿ.

ಮಹಾಭಾರತದಲ್ಲಿ ಬರುವ ಈ ಕಾವ್ಯವಸ್ತು ಬಿಂದುರೂಪ ವಾಗಿದ್ದರೂ ಉತ್ತಮವಾಗಿ ಕಡೆದಿಟ್ಟಿರುವ ಸನ್ನಿವೇಶವೆಂಬು ದನ್ನು ಮರೆಯುವಂತಿಲ್ಲ.

**ಸಂಸ್ಕೃತ ಜೈಮಿನಿ ಭಾರತ:** ಜೈಮಿನಿ ಭಾರತದ ಅಶ್ವಮೇ ಧಿಕ ಪರ್ವದಲ್ಲಿ ಮಹಾಭಾರತದ ಚಿತ್ರಾಂಗದಾ ಕಥಾವಸ್ತು ಸ್ವಲ್ಪ ಬದಲಾವಣೆಯೊಂದಿಗೆ ನಿರೂಪಿತವಾಗಿದೆ.

ಚಿತ್ರಾಂಗದೆ ಒಮ್ಮೆ ನೃತ್ಯವಾಡುತ್ತಿರಲು ತಾಳ ತಪ್ಪಿದು ದನ್ನು ಕಂಡು ಮೊಸಳೆಯಾಗೆಂದು ಶಾಪಕೊಟ್ಟನು ಅವಳ ತಂದೆ. ಅರ್ಜನನನ್ನು ಮದುವೆಯಾಗುವಳೆಂಬ ಅಭಯವನ್ನೂ ತಂದೆಯೇ ಹೇಳಿದನು. ತಂದೆಯ ಶಾಪ ಹಾಗೂ ಅಭಯದಂತೆ ಎಲ್ಲವೂ ನಡೆದುಹೋಯಿತು.

ಯಜ್ಞದ ಕುದುರೆಯನ್ನು ಹಿಂಬಾಲಿಸಿ ಅರ್ಜನನು ಮಣಲೂ ರಿಗೆ ಬಂದನು. ಬಭ್ರುವಾಹನನು ಕುದುರೆಯನ್ನು ಕಟ್ಟಿ ಹಾಕಿ ಸಿದನು. ಅವನ ಮಂತ್ರಿ ಸುಬುದ್ಧಿ ಕುದುರೆಯನ್ನು ಕಟ್ಟಿದುದು

ತಪ್ಪೆಂದೂ ತಂದೆಯ ಬಳಿ ಸಾರಿ ಕ್ಷಮೆ ಕೇಳಬೇಕೆಂದೂ ಸಲಹೆ ಮಾಡಿದನು. ಅದರಂತೆ ಬಭ್ರುವಾಹನನು ತಂದೆಯನ್ನು ಕಂಡು ಭಕ್ತಿಯನ್ನು ತೋರಿದನು. ಅರ್ಜುನನು ತನಗಿರುವವನು ಅಭಿಮನ್ಯು ಒಬ್ಬನೇ ಮಗನೆಂದೂ ಬಭ್ರುವಾಹನನು ಎಲ್ಲೊ ವೈಶ್ಯನಿಗೆ ಹುಟ್ಟಿರಬೇಕು ; ತಾಯಿಯಂತೆ ನರ್ತನಮಾಡುತ್ತ ನಟನಾಗುವುದು ಅವನಂಥ ಹೇಡಿಗೆ ಯೋಗ್ಯವಾದುದೆಂದು ಹೇಳಿ ಅವಹೇಳನ ಮಾಡಿದನು. ಈ ಚುಚ್ಚುನುಡಿಗಳನ್ನು ಕೇಳಿ ವೀರ ಬಭ್ರುವಾಹನನ ಕ್ಷಾತ್ರ ಉಕ್ಕಿತು. ಕುದುರೆಯನ್ನು ಪಟ್ಟಣಕ್ಕೆ ಕಳುಹಿಸಿ ಯುದ್ಧಕ್ಕೆ ಸಿದ್ಧನಾದನು. ಅರ್ಜುನನ ಕಡೆಯ ಸಾಲ್ವ, ಪ್ರದ್ಯುಮ್ನ ಮೊದಲಾದ ವೀರರು ಯುದ್ಧದಲ್ಲಿ ಮೂರ್ಛೆ ಹೋದರು. ಕರ್ಣನ ಮಗ ವೃಷಕೇತು ಸತ್ತುಬಿದ್ದನು ಕೊನೆಗೆ ಅರ್ಜುನನ ತಲೆಯೂ ಮಗನ ಬಾಣಕ್ಕೆ ಸಿಕ್ಕಿ ಕತ್ತರಿಸಿ ಬಿತ್ತು.

ನಾರದರಿಂದ ಗಂಗೆಯ ಶಾಪವನ್ನೂ ತಂದೆ ಮಕ್ಕಳ ಯುದ್ಧವನ್ನೂ ಕೇಳಿ ಧರ್ಮರಾಯನ ಅಪ್ಪಣೆಯನ್ನು ಪಡೆಯದೆ ಚಿತ್ರಾಂಗದೆ ನೇರವಾಗಿ ರಣಭೂಮಿಗೆ ಬಂದಳು. ಅದೇ ಸಮಯಕ್ಕೆ ಉಲೂಪಿಯೂ ಬಂದಳು. ಇಬ್ಬರೂ ಪತಿಗಾಗಿ ಗೋಳಾಡಿದರು. ತಂದೆಯನ್ನು ಕೊಂದುದಕ್ಕಾಗಿ ಮಗನನ್ನು ನಿಂದಿಸಿದಳು ಚಿತ್ರಾಂಗದೆ. ಬಭ್ರುವಾಹನನು ಅಗ್ನಿಪ್ರವೇಶ ಮಾಡಿ ಪ್ರಾಣವನ್ನು ನೀಗಲು ಸಂಕಲ್ಪಮಾಡಿದನು. ಆಗ ಉಲೂಪಿ ಬಭ್ರುವಾಹನನಿಂದ ಪಾತಾಳದಲ್ಲಿದ್ದ ಮೃತ ಸಂಜೀವಕ ಮಣಿಯನ್ನು ತರಿಸಿದಳು. ಆ ಸಮಯಕ್ಕೆ ಧೃತರಾಷ್ಟ್ರನು ಅರ್ಜುನನ ತಲೆಯನ್ನು ಮರೆಮಾಡಿದನು. ಶ್ರೀಕೃಷ್ಣನ ಸಹಾಯದಿಂದ ಆ ತಲೆ ಕಾಣಿಸಿ ಮೃತಸಂಜೀವಕ ಸ್ಪರ್ಶದಿಂದ ಅರ್ಜುನನೂ

ಅವನ ಪರಿವಾರದವರೂ ಮತ್ತೆ ಬದುಕಿದರು ಪ್ರಾಣ ಒಂದೊಡನೆ ಮಗನನ್ನು ಅರ್ಜುನ ಪ್ರೀತಿಸಿದನು. ಅನಂತರ ಯಜ್ಞ ಸಾಂಗವಾಗಿ ನೆರವೇರಿತು.

ನೀಲಧ್ವಜನ ಹೆಂಡತಿ ಜ್ವಾಲೆ ಅಗ್ನಿಪ್ರವೇಶಮಾಡಿ ಬಭ್ರುವಾಹನನ ಬತ್ತಳಿಕೆಯಲ್ಲಿ ಬಾಣವಾದ ಸಂದರ್ಭವನ್ನೂ ಜೈಮಿನಿ ಚಿತ್ರಿಸಿದ್ದಾನೆ. ಇಲ್ಲಿ ಬರುವ ಕಥೆ ಪೌರಾಣಿಕ ಘಟನೆಗಳಿಂದ ತುಂಬಿಹೋಗಿದೆ. ಜೈಮಿನಿ ಚಿತ್ರಿಸಿರುವುದು ಮುಖ್ಯವಾಗಿ ಅರ್ಜುನ ಬಭ್ರುವಾಹನರ ಕಾಳಗ. ಈ ಭಾಗವನ್ನು ಉತ್ತರ ಚಿತ್ರಾಂಗದಾ ಎಂದು ಕಥೆಯ ದೃಷ್ಟಿಯಿಂದ ಕರೆಯಬಹುದು.

**ಕನ್ನಡ ಜೈಮಿನಿ ಭಾರತ :** ಲಕ್ಷ್ಮೀಶನು ಸಂಸ್ಕೃತ ಜೈಮಿನಿ ಭಾರತವನ್ನು ಅನುಸರಿಸಿ ಕನ್ನಡದಲ್ಲಿ ಜೈಮಿನಿ ಭಾರತವನ್ನು ರಚಿಸಿದ್ದಾನೆ. ಲಕ್ಷ್ಮೀಶನು ಚಿತ್ರಾಂಗದೆಯ ಕಥಾವಸ್ತುವನ್ನು ಚಿತ್ರಿಸುವಾಗ ಜೈಮಿನಿಯನ್ನು ಅನುಸರಿಸಿದ್ದರೂ ಕೆಲವು ಕಡೆಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿ ರಸತುಂಬುವ ಕೌಶಲವನ್ನು ತೋರಿದ್ದಾನೆ. ಚಿತ್ರಾಂಗದೆ ಸಂಸ್ಕೃತ ಜೈಮಿನಿ ಭಾರತದಲ್ಲಿರುವಂತೆ ಹಸ್ತಿನಾಪುರದಲ್ಲಿರದೆ ಮಣಿಪುರದಲ್ಲಿಯೇ ಇರುವಂತೆ ಚಿತ್ರಿಸಿರುವುದು ಕಾವ್ಯದೃಷ್ಟಿಯಿಂದ ಉತ್ತಮವಾಗಿದೆ. ತಂದೆಯನ್ನು ಕೊಂದ ದುಃಖದಿಂದ ಅಗ್ನಿಪ್ರವೇಶ ಮಾಡಲು ಇಚ್ಛಿಸಿದ ಮಗನಿಗೆ ಶ್ರೀಕೃಷ್ಣನ ಆಗಮನವನ್ನು ಕಾದು ನೋಡಬೇಕೆಂದು ಬುದ್ಧಿ ಹೇಳುತ್ತಾಳೆ ಚಿತ್ರಾಂಗದೆ. ಈ ಸನ್ನಿವೇಶ ಮೂಲದಲ್ಲಿಲ್ಲ, ಲಕ್ಷ್ಮೀಶನ ಪ್ರತಿಭೆಯ ಸೃಷ್ಟಿ. ಕೊನೆಯಲ್ಲಿ ಶ್ರೀಕೃಷ್ಣನೊಡನೆ ಕುಂತಿ ಯಶೋದೆಯರೂ ಆಗಮಿಸುವ ಸನ್ನಿವೇಶ ಚಿತ್ರಣವೂ ಲಕ್ಷ್ಮೀಶನದೆ. ಉಳಿದ ಕಥೆ ಸಂಸ್ಕೃತ ಜೈಮಿನಿ ಭಾರತದಂತೆಯೇ ಇದೆ ಲಕ್ಷ್ಮೀಶನು ಕಾವ್ಯದೃಷ್ಟಿಯಿಂದ ಉತ್ತಮ

ವಾಗಿ ಪಾತ್ರಸೃಷ್ಟಿ ಮಾಡಿದರೂ ಅತಿಮಾನುಷತೆಯಿಂದ ಈ ಸನ್ನಿವೇಶವನ್ನು ಪಾರುಮಾಡುವುದು ಅವನಿಗೆ ಸಾಧ್ಯವಾಗಲಿಲ್ಲ.

**ರವೀಂದ್ರರ ಚಿತ್ರಾ ನಾಟಕ:**—ರವೀಂದ್ರನಾಥ ಠಾಕೂರರು ಅರ್ಜುನ ಚಿತ್ರಾಂಗದೆಯರ ಪ್ರಣಯವನ್ನು ಮಾತ್ರ ಚಿತ್ರಿಸುವ ಗೀತಾನಾಟಕವನ್ನು ರಚಿಸಿದ್ದಾರೆ ಒಂಬತ್ತು ದೃಶ್ಯಗಳಿಂದ ಕೂಡಿದ ಏಕಾಂಕ ನಾಟಕವಿದು. ಅದರ ಕಥೆಯು ಓಟ ಹೀಗಿದೆ :

ಮಣಿಪುರದ ರಾಜನ ಒಬ್ಬಳೆ ಮಗಳು ಚಿತ್ರಾ. ಈ ರಾಜವಂಶದಲ್ಲಿ ಈಶ್ವರನ ವರದಿಂದ ಒಬ್ಬನೆ ಗಂಡು ಮಗನು ಹುಟ್ಟುವನೆಂಬ ವರವಿತ್ತು. ಆದರೆ ಚಿತ್ರಾ ಹೆಣ್ಣಾಗಿ ಹುಟ್ಟಿ ಗಂಡು ಮಗುವಿನಂತೆಯೆ ಬೆಳೆದು ರಾಜಪುತ್ರರಿಗೆ ಯೋಗ್ಯವಾದ ಬಿಲ್ಲಿನ ವಿದ್ಯೆಯಲ್ಲಿ ನಿಪುಣಳಾದಳು.

ಒಂದು ದಿನ ಅವಳು ಪುರುಷವೇಷದಲ್ಲಿ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ತಾಪಸಿಯ ವೇಷದಲ್ಲಿ ಪುರುಷನೊಬ್ಬನು ದಾರಿಗಡ್ಡವಾಗಿ ಮಲಗಿದ್ದುದನ್ನು ಕಂಡು ತನ್ನ ಬಿಲ್ಲಿನ ತುದಿಯಿಂದ ಅವನನ್ನು ತಿವಿದಳು. ಅವನು ರೋಷದಿಂದ ಎದ್ದು ನಿಂತನು. ಚಿತ್ರಾಂಗದೆಯು ಎಳೆಯ ವಯಸ್ಸನ್ನು ಕಂಡು ಅವನ ಉಕ್ಕಿದ ರೋಷ ತಗ್ಗಿ ಮುಖದಲ್ಲಿ ಮಂದಹಾಸ ಮೂಡಿತು. ಅವನ ದೇಹದ ಕಾಂತಿಯನ್ನು ನೋಡಿ ಆಕೆಯ ಮನದಲ್ಲಿ ಮನ್ಮಥ ಸಂಚಾರವಾಯಿತು. ಆ ಸುಂದರ ಪುರುಷನು ಅರ್ಜುನನೆಂಬುದನ್ನು ಅವಳು ಕೇಳಿ ತಿಳಿದುಕೊಂಡಳು. ಅವಳಿಗೆ ತನ್ನ ಆರಾಧ್ಯ ದೇವತೆಯು ಮುಂದೆ ನಿಂತಿದ್ದರೂ ಮಾತನಾಡಲು ಒಂದು

ಅಕ್ಷರವೂ ಹೊರಡಲಿಲ್ಲ. ಅರ್ಜುನನು ತನ್ನ ಪಾಡಿಗೆ ತಾನು ಅರಣ್ಯದೊಳಕ್ಕೆ ಹೊರಟುಹೋದನು.

ಮರುದಿನ ಚಿತ್ರಾಂಗದೆ ಎಂದಿನಂತೆ ಗಂಡು ವೇಷವನ್ನು ಧರಿಸುವುದನ್ನು ಬಿಟ್ಟು ಸ್ತ್ರೀವೇಷವನ್ನು ಧರಿಸಿ ಅರ್ಜುನನನ್ನು ಅರಸುತ್ತ ವನದ ದೇವಾಲಯದಲ್ಲಿ ಅವನನ್ನು ಕಂಡು ಸ್ತ್ರೀ ಸಹಜವಾದ ನಾಚಿಕೆ ವೈಯಾರಗಳನ್ನು ಅರಿಯದ ಅವಳು ತನ್ನ ಪ್ರಣಯುವನ್ನು ಒರಟೊರಟಾಗಿ ಹೇಳಿಕೊಂಡಳು. ಅರ್ಜುನನು ತನ್ನ ಹನ್ನೆರಡು ವರ್ಷಗಳ ಬ್ರಹ್ಮಚರ್ಯದ ವ್ರತವನ್ನು ಮುಂದೊಡ್ಡಿ ಅವಳ ಪ್ರಣಯ ಭಿಕ್ಷೆಯನ್ನು ತಿರಸ್ಕರಿಸಿದನು.

ಚಿತ್ರಾಂಗದೆಯ ಜೀವನದಲ್ಲಿ ಈ ತಿರಸ್ಕಾರ ಮೊದಲ ಬಾರಿಗೆ ಸಿಡಿಲಿನಂತೆ ಬಂದೆರಗಿತು. ಅರಮನೆಗೆ ಹಿಂತಿರುಗಿ ಅದುವರೆಗೆ ಪ್ರಿಯವಾಗಿದ್ದ ಬಿಲ್ಲುಬಾಣಗಳನ್ನು ಮುರಿದು ಎಸೆದಳು. ಅರ್ಜುನನನ್ನು ಒಲಿಸಲಾರದೆ ಹೋದ ಅತೃಪ್ತಿಯ ಬೆಂಕಿ ಅವಳನ್ನು ದಹಿಸಲಾರಂಭಿಸಿತು. ಮದನ ಮತ್ತು ವಸಂತರಲ್ಲಿ ಅವಳು ಶರಣಾಗಿ ಅರ್ಜುನನನ್ನು ಸೋಲಿಸುವ ಅನುಪಮ ಸೌಂದರ್ಯವನ್ನು ಒಂದು ದಿನದ ಮಟ್ಟಿಗೆ ದಯಪಾಲಿಸಬೇಕೆಂದು ಮನ್ಮಥನನ್ನು ಪ್ರಾರ್ಥಿಸಿದಳು. ಮ ದ ನ ನು ತಥಾಸ್ತು ಎಂದನು. ವಸಂತನು ವಸಂತಕಾಲದ ಹೂವುಗಳ ಸೌಂದರ್ಯ ಒಂದು ವರ್ಷಕಾಲ ಅವಳನ್ನು ಮುತ್ತಿರಲಿ ಎಂದು ವರವನ್ನಿತ್ತನು.

ಮದನ ವಸಂತರ ವರದಿಂದ ಅಪೂರ್ವ ಸೌಂದರ್ಯವನ್ನು ಪಡೆದ ಚಿತ್ರಾಂಗದೆ ಕಾಡಿನ ಸರೋವರದ ಬಳಿ ಕುಳಿತು ತನ್ನ ದೇಹಸೌಂದರ್ಯವನ್ನು ನೋಡಿಕೊಂಡು ತಾನೆ ಹಿಗ್ಗಿದಳು. ಮಧುರ ಆಲಿಂಗನಕ್ಕೆ ಸಿದ್ಧವಾದ ಎದೆಯು ಉಬ್ಬನ್ನು

ಬಳುಕುವ ಬಾಹುಗಳನ್ನೂ ರಸರಸವಾದ ತುಟಿಗಳನ್ನೂ ನೋಡಿಕೊಂಡು ಮುಂಬರುವ ಸುಖವನ್ನು ನೆನೆದು ಸವಿಯತೊಡಗಿದಳು. ಅನಂತರ ಯಾವುದೋ ಯೋಚನೆಯಲ್ಲಿ ತೊಡಗಿ ತಲೆಯ ಸೋರ್ಮುಡಿಯನ್ನು ಕಟ್ಟಿಕೊಂಡು ಹೊರಟಳು. ಈ ದೃಶ್ಯವನ್ನು ಅರ್ಜುನನು ದೂರದಲ್ಲಿಯೆ ಕಂಡು ಆ ತರುಣಿಯ ಅಪಾರ ಲಾವಣ್ಯಕ್ಕೆ ಮನಸೋತು ಹತ್ತಿರದಲ್ಲಿದ್ದ ಶಿವಾಲಯಕ್ಕೆ ಹೋದನು.

ಪ್ರಮದೆಯ ಲಾವಣ್ಯವನ್ನು ನೆನೆಯುತ್ತ ಅರ್ಜುನನು ವಿಶ್ರಮಿಸಿದ್ದ ಶಿವನ ಗುಡಿಗೆ ಚಿತ್ರಾಂಗದೆಯೂ ಬಂದಳು. ಅವಳ ಅನನ್ಯ ಸೌಂದರ್ಯವನ್ನು ಪರಿಪರಿಯಾಗಿ ವರ್ಣಿಸಿ ಪ್ರೇಮಭಿಕ್ಷೆಗಾಗಿ ಯಾಚಿಸಿದನು. ಸ್ತ್ರೀಸಹಜವಾದ ಪ್ರಥಮ ಸಂಯಮದಿಂದ ಚಿತ್ರಾಂಗದೆ ವ್ರತಭಂಗ ಮಾಡಬಾರದೆಂದು ಅರ್ಜುನನಿಗೆ ಬುದ್ಧಿ ಹೇಳಿ ಅಲ್ಲಿಂದ ಹೊರಟುಹೋದಳು.

ಮರುದಿನ ಚಿತ್ರಾಂಗದೆ ಕಾಡಿನ ಸರೋವರದ ಬಳಿ ಹುಲ್ಲಿನ ಮೇಲೆ ಅರ್ಜುನನು ತನ್ನನ್ನು ಬಣ್ಣಿಸಿದ ಮಾತುಗಳನ್ನು ನೆನೆಯುತ್ತ ಸುಖಿಸುತ್ತ ನಿದ್ದೆಹೋದಳು. ಹಗಲುಕಳೆದು ಸಂಜೆಯಾಗುತ್ತ ಬರಲು ಆಕೆಗೆ ಎಚ್ಚರವಾಯಿತು. ಅವಳ ಕಾಲ ಬಳಿ ಅರ್ಜುನ ಎವೆಯಿಕ್ಕದೆ ಅವಳ ಲಾವಣ್ಯವನ್ನು ಕಣ್ಣಿನಲ್ಲಿ ಹೀರುತ್ತ ನಿಂತಿದ್ದನು. ಸಂಜೆ ಮರೆಯಾಗಿ ಚಂದ್ರನ ಬೆಳಕು ಸುತ್ತಲೂ ಮಧುವಿನಂತೆ ಹರಿಯತೊಡಗಿತು. ಪ್ರಿಯೆ, ಪ್ರಿಯತಮೆ ಎಂದು ಕರೆಯುತ್ತ ಅವಳನ್ನು ಮಧುರ ಮಿಲನಕ್ಕೆ ಆಹ್ವಾನಿಸಿದನು. ಎಷ್ಟೋ ಜನ್ಮದ ಪ್ರೇಮಸಂಬಂಧದ ನೆನಪು ಉಕ್ಕಿ ಬಂದಂತಾಗಿ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಬಿಟ್ಟಳು ಚಿತ್ರಾಂಗದೆ. ಬೆಳಗಾಗಲು ಮತ್ತೆ ಯಾವುದೋ ಭೀತಿಯಿಂದ ಅವಳು ದೂರ ಹೋಗಿ ಅಳುವುದಕ್ಕೆ ಯತ್ನಿಸಿದಳು. ಆದರೆ

ಮನ್ಮಥನ ಆವೇಶ ಆ ಕಣ್ಣೀರನ್ನು ತಡೆಹಿಡಿದು ಅರ್ಜುನನ ಬಳಿಗೇ ಅವಳನ್ನು ಕಳುಹಿಸಿತು.

ಅರ್ಜುನನು ವಶವಾಗಿರುವುದು ತನ್ನ ಸೌಂದರ್ಯಕ್ಕಲ್ಲ ಮದನ ವಸಂತರ ವರಬಲದಿಂದೊದಗಿದ ಸೌಂದರ್ಯಕ್ಕೆ ಎಂಬ ಭಾವನೆ ಬಂದು ಚಿತ್ರಾಂಗದೆ ಅರ್ಜುನನಿಂದ ಮನಸ್ಸನ್ನು ಹಿಂದೆ ಸೆಳೆಯಲು ಪ್ರಯತ್ನಿಸಿದಳು. ಅದು ಸಾಧ್ಯವಾಗಲಿಲ್ಲ. ಮದನ ವಸಂತರು ಯೌವನದ ವಿಲಾಸ ವಿಭ್ರಮವನ್ನು ವಿವರಿಸಿ ಅವಳಿಗೆ ಪ್ರೋತ್ಸಾಹವಿತ್ತರು.

ಚಿತ್ರಾಂಗದೆ ಹೂಮಾಲೆಯನ್ನು ಕಟ್ಟುತ್ತ ಕುಳಿತಾಗ ಅವಳನ್ನು ತನ್ನ ನಗರಕ್ಕೆ ಕರೆದೊಯ್ಯಬೇಕೆಂದು ಅರ್ಜುನ ಹಂಬಲಿಸಿದನು. ಚಿತ್ರಾಂಗದೆ ತನ್ನನ್ನು ಕಾಡುಹೂಗಳಿಗೆ ಹೋಲಿಸಿಕೊಂಡು ಅರಮನೆಯನ್ನು ಸೇರಿ ತಿರಸ್ಕೃತಳಾಗುವುದಕ್ಕಿಂತ ಕಾಡುಹೂಗಳ ಜೊತೆಗೆ ಬಿದ್ದು ಹೋಗುವುದೆ ಲೇಸೆಂದು ಯೋಚಿಸಿದಳು. ವಸಂತನು ಕೊಟ್ಟಿದ್ದ ಒಂದು ವರ್ಷದ ಅವಧಿ ಮುಗಿಯುತ್ತ ಬಂದಿತು. ವಸಂತನಿಗೆ ದಣಿವೂ ಆಗಿತ್ತು. ಆದರೆ ಒಂದು ದಿನ ವರವನ್ನಿತ್ತ ಮದನನು ಮಾತ್ರ ದಣಿಯದೆ ಪ್ರಮತ್ತನಾಗಿಯೇ ಇದ್ದನು. ಇದೇ ಸಮಯದಲ್ಲಿ ಪ್ರಾರಂಭವಾಯಿತು ಮಳೆಗಾಲ. ಅರ್ಜುನನಿಗೆ ಉದಿಸಿತು ಬೇಟೆಯ ಆಸೆ. ಆದರೆ ಬೇಟೆಗೆ ಹೋಗಲಾರದೆ ಚಿತ್ರಾಂಗದೆಯ ಬೇಟದ ಆಸೆಯನ್ನು ಪೂರೈಸುವುದಕ್ಕಾಗಿಯೆ ನಿಂತನು. ವರ್ಷದ ಕೊನೆಯ ದಿನವೂ ಬಂದಿತು. ದೀಪ ಆರುವ ಮೊದಲು ಪ್ರಜ್ವಲಿಸುವಂತೆ ತನ್ನ ಸೌಂದರ್ಯವು ಅಪರಿಮಿತವಾಗಿ ವಿರಾಜಿಸಲೆಂದು ಚಿತ್ರಾಂಗದೆ ಬಯಸಿದಳು.

ಈ ವೇಳೆಗೆ ದರೋಡೆಕಾರರಿಂದ ಹಳ್ಳಿಯ ಜನಗಳ ಆಸ್ತಿಪಾಸ್ತಿಗಳಿಗೆ ನಷ್ಟವುಂಟಾಗುವುದೆಂಬುದನ್ನು ಹಳ್ಳಿಯ ಜನರಿಂದ

ಅರ್ಜುನನು ತಿಳಿದನು. ರಾಜ್ಯದಲ್ಲಿ ತಾಯಿಯಂತೆ ಪ್ರೇಮದಿಂದ ವರ್ತಿಸುತ್ತಿದ್ದ, ಯುವರಾಜನಂತೆ ದುಷ್ಟರನ್ನು ದಂಡಿಸುತ್ತಿದ್ದ ಚಿತ್ರಾಂಗದೆ ಎಲ್ಲಿಗೋ ತೀರ್ಥಯಾತ್ರೆಗೆ ಹೋಗಿರುವಳೆಂದು ಹಳ್ಳಿಯ ಜನರು ಅರ್ಜುನನಿಗೆ ಹೇಳಿದರು. ಈ ವಿಚಾರವನು ಕೇಳಿ ಅರ್ಜುನನ ಆಸಕ್ತಿ ಚಿತ್ರಾಂಗದೆಯ ವಿಚಾರದಲ್ಲಿ ಬೆಳೆಯಿತು. ಚಿತ್ರಾಂಗದೆಯ ಸೌಂದರ್ಯವನ್ನು ಹೀರಿದ ಅರ್ಜುನನಿಗೆ ಅವಳ ಹೆಸರನ್ನೂ ಅವಳ ತಂದೆ, ತಾಯಿ, ಇವರೆಲ್ಲರ ಹೆಸರನ್ನೂ ತಿಳಿಯಲು ಆಸಕ್ತಿಯಾಯಿತು. ಚಿತ್ರಾಂಗದೆ ಯಾವುದನ್ನೂ ಹೇಳದೆ ಆ ಪ್ರಶ್ನೆಯನ್ನೆ ಮರೆಸಿದಳು. ಅವಳ ಹೃದಯ ಒಂದು ವರ್ಷ ಮುಗಿದುಹೋದುದನ್ನು ಚಿಂತಿಸಿತು. ಅರ್ಜುನ ತಿಳಿಯಲೆತ್ನಿಸುತ್ತಾನೆ ಅವಳ ಎದೆಗುದಿತವನ್ನು.

ತಾನು ಮೊದಲು ಶಿವಾಲಯದಲ್ಲಿ ಪ್ರಣಯ ಭಿಕ್ಷೆಯನ್ನು ಬೇಡಿದಂದಿನಿಂದ ಮದನ ವಸಂತರ ವರದಿಂದ ಲಾವಣ್ಯವತಿಯಾಗಿ ಒಂದು ವರ್ಷಕಾಲ ಅರ್ಜುನನ ಪ್ರಿಯೆಯಾದುದನ್ನು ಚಿತ್ರಾಂಗದೆ ಅರ್ಜುನನಿಗೆ ವಿವರಿಸಿದಳು. ಗರ್ಭಿಣಿಯಾದ ಅವಳು ಮುಂದೆ ಜನಿಸುವ ಮಗನನ್ನು ಎರಡನೆಯ ಅರ್ಜುನನೆಂಬಂತೆ ಸಲಹಿ ಅವನ ಬಳಿಗೆ ಕಳುಹಿಸುವುದಾಗಿ ಹೇಳಿದಳು. ಹೀಗೆಂದ ಚಿತ್ರಾಂಗಿ ತನ್ನನ್ನು ಸಂಪೂರ್ಣವಾಗಿ ಅರ್ಜುನನಿಗೆ ಅರ್ಪಿಸಿಕೊಂಡಳು. "ಪ್ರಿಯೆ, ನನ್ನ ಜೀವನವಿಂದು ಪೂರ್ಣವಾಯಿತು" ಎಂದು ಹೇಳುತ್ತಾನೆ ಅರ್ಜುನ! ಇಲ್ಲಿಗೆ ನಾಟಕ ಮುಗಿಯುತ್ತದೆ.

ಮದನ ವಸಂತರ ಪ್ರತಿಮೆಗಳನ್ನು ಚಿತ್ರಿಸಿ, ಸ್ತ್ರೀಸಹಜವಾದ ಮೂಲಸ್ಫೂರ್ತಿ, ಹೆಣ್ಣಾಗಿ ಹುಟ್ಟಿ, ಗಂಡಿನಂತೆ ಬೆಳೆದ ಚಿತ್ರಾಂಗಿಯ ಹೃದಯದಲ್ಲಿ ಹೇಗೆ ಮೂಡಿತೆಂಬುದನ್ನು ಮಾನಮುಟ್ಟ

ವಂತೆ ಚಿತ್ರಿಸಿದ್ದಾರೆ ಠಾಕೂರರು. ಮನಶ್ಶಾಸ್ತ್ರ ದೃಷ್ಟಿಯಿಂದಲೂ ಈ ಚಿತ್ರಣ ಉತ್ತಮವಾಗಿದೆ. ನವತಾರುಣ್ಯದ ಉನ್ಮತ್ತ ಲಾವಣ್ಯ ಗರ್ಭವತಿಯಾದೊಡನೆ ಕಡಮೆಯಾಗುತ್ತ ತಾಯ್ತನದ ಗೌರವ ಮೂಡುವುದನ್ನು ಪ್ರತಿಬಿಂಬಿಸಲು ಒಂದು ವರ್ಷದ ಅವಧಿಯನ್ನು ತೆಗೆದಿದ್ದಾರೆ. ಈ ಸಂಕೇತವೇನೋ ಉತ್ತಮವಾದುದು. ಆದರೆ ಒಂದು ವರ್ಷಕಾಲ ಚಿತ್ರಾಂಗದೆ ತಂದೆ ತಾಯಿಗಳಿಂದ ದೂರವಿರುವುದು ಸಾಧ್ಯವೆ? ಎಂಬ ಸಂಶಯ ಮಾತ್ರ ಓದುಗರಲ್ಲಿ ಉಳಿಯದೆ ಇರದು. ತಂದೆತಾಯಿಗಳನ್ನು ಗಮನಿಸದೆ ಪ್ರಣಯದಲ್ಲಿ ಸ್ವಾತಂತ್ರ್ಯವನ್ನು ಚಿತ್ರಾಂಗದೆ ವಹಿಸಿದುದು ಸರಿಯೆ? ವ್ರತನಿಷ್ಠ ಅರ್ಜುನನು ವ್ರತಭಂಗ ಮಾಡಿದುದು ಧರ್ಮವೆ? ಈ ಪ್ರಶ್ನೆಗಳಿಗೆ ರವೀಂದ್ರರ ನಾಟಕದಲ್ಲಿ ಉತ್ತರವಿಲ್ಲ. ಉತ್ತರ ಹೇಳಬೇಕೆಂಬುದು ನಾಟಕದ ಉದ್ದೇಶವೂ ಇಲ್ಲದಿರಬಹುದು ಆದರೆ ಜೀವನದಲ್ಲಿ ಇವುಗಳನ್ನು ಮರೆಯುವಂತಿಲ್ಲ ಶ್ರೀ ಕುವೆಂಪು ಇವೆಲ್ಲವನ್ನೂ ಗಮನಿಸಿ ತಮ್ಮ ಚಿತ್ರಾಂಗದಾ ಕಾವ್ಯದಲ್ಲಿ ಚಿತ್ರಾಂಗದೆಯ ಪೂರ್ಣ ಚಿತ್ರವನ್ನು ಕೊಡುತ್ತಾರೆ.

# ೨. ಶ್ರೀ ಕುವೆಂಪು ಕೃತ ಚಿತ್ರಾಂಗದಾ ಕಾವ್ಯದ ಕಥಾಸಂವಿಧಾನ

ಶ್ರೀ ಕುವೆಂಪು ಅವರ ಚಿತ್ರಾಂಗದಾ ಕಾವ್ಯ ಆರು ಪರ್ವಗಳಿಂದ ಕೂಡಿದೆ; ೨೪೯೬ ಪಂಕ್ತಿಗಳಷ್ಟು ದೀರ್ಘವಾಗಿದೆ. ವ್ಯಾಸ ಪ್ರತಿಭೆಯಿಂದ ಹೊಮ್ಮಿದ ಈ ಕಥಾವಸ್ತು ಜೈಮಿನಿ, ಲಕ್ಷ್ಮೀಶ ರವೀಂದ್ರನಾಥ ಠಾಕೂರ ಇವರ ಪ್ರತಿಭೆಯಲ್ಲಿ ವಿಕಸಿತವಾಗಿ ಶ್ರೀ ಕುವೆಂಪು ಅವರ ಪ್ರತಿಭೆಯಲ್ಲಿ ಚಿರನೂತನವಾಗಿ ಬೆಳಗುವ ಕಾವ್ಯವಾಗಿದೆ. ಪ್ರಾಚೀನ ಕಥಾವಸ್ತುವನ್ನು ಕೆಲವೆಡೆಗಳಲ್ಲಿ ಮಾರ್ಪಡಿಸಿ ಕೆಲವೆಡೆಗಳಲ್ಲಿ ಕಲ್ಪನೆ ಪ್ರತಿಭೆಗಳಿಂದಲೆ ಬೆಳೆಸಿ ನೂತನ ಕಥಾಸಂವಿಧಾನವನ್ನು ಕಾವ್ಯದಲ್ಲಿ ಮೂಡಿಸಿದ್ದಾರೆ.

ಕಾವ್ಯಾರಂಭದಲ್ಲಿ ಕನ್ನಡ ನಾಡಿನ ಹೃದಯವನ್ನು ಅರಳಿಸುವ ಕಾವ್ಯವನ್ನು ಹಾಡುವ ಶಕ್ತಿಗಾಗಿ ಸರಸ್ವತಿಯನ್ನು ಪ್ರಾರ್ಥಿಸಿದ್ದಾರೆ ಕವಿ. ಚಿತ್ರಾಂಗದಾ ಕಾವ್ಯದ ಕಥಾ ಸಂವಿಧಾನ ಹೀಗೆ ಸಾಗುತ್ತದೆ:

**ಮೊದಲನೆಯ ಪರ್ವ :**—ಮಣಿಪುರದ ರಾಜಕುಮಾರಿ ಚಿತ್ರಾಂಗದೆ ಹೆಣ್ಣಾಗಿ ಹುಟ್ಟಿದರೂ ಕ್ಷತ್ರಿಯೋಚಿತವಾದ ವಿದ್ಯೆಯನ್ನು ಕಲಿತು ರಾಜಕುಮಾರನಂತೆ ಬೆಳೆದಳು. ಒಂದು ದಿನ ಬೇಟೆಯಿಂದ ಬಹಳ ಬಳಲಿ ಅರಣ್ಯದಲ್ಲಿದ್ದ ಶಿವನ ಗುಡಿಯ ಕಲ್ಲು ನೆಲದ ಮೇಲೆ ಮಲಗಿ ನಿದ್ದೆಹೋದಳು. ನಿದ್ದೆಯಲ್ಲಿ ಅದ್ಭುತವಾದ ಕನಸೊಂದು ಬಿತ್ತು. ಹೀಗಿತ್ತು ಆ ಕನಸು: ದಟ್ಟವಾದ ಅರಣ್ಯ ಮಧ್ಯದಲ್ಲಿ ಚಿತ್ರಾಂಗದೆ ಬಿಲ್ಲನ್ನು ಹಿಡಿದು ಬೇಟೆಗಾಗಿ ಅಲೆಯುತ್ತಿದ್ದಳು. ಇದ್ದಕ್ಕಿದ್ದಂತೆ ಬೆದರಿದ ಜಿಂಕೆ ಮರಿಯೊಂದು ಪೊದರಿನಿಂದ ಚಿಮ್ಮಿ ಓಡಿತು. ಆ ಮರಿಯನ್ನು ಸ್ವಲ್ಪವೂ

ನೋಯಿಸದೆ ಹಿಡಿಯಬೇಕೆಂದು ಆಸೆಯಾಯಿತು ಅವಳಿಗೆ. ಹಳ್ಳ ಕೊಳ್ಳ ಮುಳ್ಳು ಕಲ್ಲು ಯಾವುದನ್ನೂ ಲಕ್ಷಿಸದೆ ಹಿಂಬಾಲಿಸಿದಳು ಆ ಮರಿಯನ್ನು. ಎಷ್ಟು ಓಡಿ ದಣಿದರೂ ಆ ಮರಿ ಸಿಕ್ಕಲಿಲ್ಲ. ಆಗ ಅವಳಿಗೆ ಕೋಪ ಬಂದು ಜಿಂಕೆ ಮರಿಯನ್ನು ಕೊಲ್ಲಲೆಂದು ಬಿಲ್ಲಿಗೆ ಅಂಬನ್ನು ಹೂಡಿದಳು. ಗುರಿ ನೋಡುವಷ್ಟರಲ್ಲಿ ಕಾಣಿಸಿತು ಮತ್ತೊಂದು ಅದ್ಭುತ ದೃಶ್ಯ! ಜಿಂಕೆ ಮರಿಗೆ ಬದಲಾಗಿ ಒಂದು ಸರೋವರದ ಮಧ್ಯೆ ಬಣ್ಣಬಣ್ಣದ ಹೂವುಗಳಿಂದ ತುಂಬಿ ರಮಣೀಯವಾದ ದ್ವೀಪ ಕಾಣಿಸಿತು. ಆ ದ್ವೀಪದ ಮಧ್ಯೆ ತೇಜಸ್ವಿಯಾದ ಮಾನವನೊಬ್ಬನು ಗೋಚರವಾದನು. ಆ ತೇಜೋಮೂರ್ತಿಯನ್ನು ನೋಡಿದೊಡನೆ ಚಿತ್ರಾಂಗದೆಯ ಹೃದಯದಲ್ಲಿ ಮೊತ್ತಮೊದಲು ಮೂಡಿತು ತಾನು ಹೆಣ್ಣೆಂಬ ಲಜ್ಜೆ. ಅವಳು ಈ ಸ್ಥಿತಿಯಲ್ಲಿರುವಾಗಲೆ ಮಧುಮದನರು ತೇಲಿ ಬಂದರು ವಿಲಾಸದಿಂದ. ಈ ರೀತಿ ಪವಾಡದಂತೆ ಒಂದಾದಮೇಲೊಂದು ಅದ್ಭುತವನ್ನು ಕಾಣುತ್ತಿದ್ದ ಅವಳಿಗೆ ನಿದ್ದೆಯಿಂದ ಎಚ್ಚರವಾಯಿತು. ಶಿವನ ವಿಗ್ರಹಕ್ಕೆ ಕೈಮುಗಿದು ಕನಸಿನ ಸವಿಯನು ಸವಿಯುತ್ತ ಉಷಃ ಕಾಲದಲ್ಲಿಯೇ ಸರೋವರದ ತೀರಕ್ಕೆ ಹೋದಳು.

ಮೂಡಣ ಬಾನಿನಲ್ಲಿ ಕೆಂಬೆಳಗು ಕಾಣಿಸಿ ಪ್ರಭಾತ ಕಾಲವು ಸುಂದರವಾಗಿತ್ತು. ಮೌನವಾಗಿದ್ದ ಪ್ರಕೃತಿ ಪಕ್ಷಿಗಳ ಇಂಚರದಿಂದ ಸ್ವರ್ಗವಾಯಿತು. ಭ್ರಮರಗಳೂ ಮಧುಪಗಳೂ ಹೂವಿನಿಂದ ಹೂವಿಗೆ ಹಾರಿ ಝೇಂಕರಿಸಲಾರಂಭಿಸಿದುವು. ಸರೋವರದ ಎದುರುಪಕ್ಕದ ಬಂಡೆಯ ಮೇಲೆ ಮನ್ಮಥ ಸದೃಶ ಕಾಷಾಯ ವಸ್ತ್ರಧಾರಿ ತೇಜಸ್ವಿಯೊಬ್ಬನು ಕಾಣಿಸಿದನು ಚಿತ್ರಾಂಗದೆಗೆ. ಆ ವೈರಾಗಿ ಇದ್ದ ಎಡೆಗೆ ಹೋದಾಗ ಅವನಿನ್ನೂ ಧ್ಯಾನಮಗ್ನ

ನಾಗಿಯೆ ಕುಳಿತಿದ್ದನು. ಸ್ವಲ್ಪ ಹೊತ್ತಾದ ಬಳಿಕ ಆ ದಿವ್ಯ ತೇಜಸ್ವಿ ತನ್ನ ವಿಶಾಲವಾದ ಕಣ್ಣುಗಳನ್ನು ತೆರೆದು, "ಯಾರು ನೀನು ಓ ತರುಣ! ಬೆಳಗಿನ ಹೊತ್ತಿನಲ್ಲಿ ಮೃಗಯಾ ವಿನೋದವೊ ಸೌಂದರ್ಯ ರಸಾಸ್ವಾದನೆಯೊ ಏಕೆ ಬಂದಿರುವೆ? ಹೇಳು, ಅಂಜಬೇಡ" ಎಂದು ಗಂಡುಡುಗೆಯಲ್ಲಿದ್ದ ಚಿತ್ರಾಂಗದೆಯನ್ನು ಕೇಳಿದನು. ನಾಚುತ್ತ ನಿಂತಿದ್ದ ಚಿತ್ರಾಂಗದೆಗೆ 'ಅಂಜದಿರು' ಎಂಬ ಮಾತನ್ನು ಕೇಳಿದೊಡನೆ ಆವಳ ಹೃದಯದಲ್ಲಿದ್ದ ಕ್ಷಾತ್ರವು ಉದ್ದೀಪನವಾಯಿತು. "ಅಂಜುವವರು ನಾವಲ್ಲ, ಅಂಜುಕುಳಿಗಳ ರಕ್ಷಣೆಯೇ ನಮ್ಮ ಧರ್ಮ, ನೀನಾರು ಹೇಳು ತಪಸ್ವಿ ? " ಎಂದು ಅವನನ್ನು ಪ್ರಶ್ನಿಸಿದಳು. ಆವಳ ಬಿಂಕದ ನುಡಿಗಳನ್ನು ಕೇಳಿ ವ್ಯಂಗವಾಗಿಯೆ ಉತ್ತರ ಹೇಳುತ್ತ ಕೊನೆಗೆ ದುರ್ಯಶಕ್ಕೀಡಾಗಿ ತೊಳಲುತ್ತಿರುವ ಅರ್ಜುನನು ತಾನೇ ಎಂದು ಹೇಳಿ ಸಿಂಹಗಾಂಭೀರ್ಯದಿಂದೆದ್ದು ಅಡವಿಯಲ್ಲಿ ಮರೆಯಾದನು. ಚಿತ್ರಾಂಗದೆಯ ಹೃದಯ. ಲಜ್ಜೆ ಭಯ ವಿಸ್ಮಯಗಳ ಭರದಿಂದ ಕುಗ್ಗಿ ಹೋಯಿತು.

ಎರಡನೆಯ ಪರ್ವ :—ಅರ್ಜುನನಿಂದ ತಿರಸ್ಕೃತಳಾದ ಚಿತ್ರಾಂಗದೆ ಮನ್ಮಥ ಬಾಧೆಯಿಂದ ಕಂದಿ ಕುಂದಿ ಶಿವನ ಗುಡಿಯ ಬಳಿ ಇದ್ದ ತನ್ನ ಕುದುರೆಯನ್ನೇರಿ ದೂರದಲ್ಲಿದ್ದ ಶಿಬಿರವನ್ನು ಸೇರಿದಳು. ತನ್ನನ್ನು ಸ್ವಾಗತಿಸಿದವರನ್ನು ಮಿತ ಭಾಷೆಯಲ್ಲಿಯೆ ಬೀಳ್ಕೊಂಡು ತನ್ನ ಪಟಹರ್ಮ್ಯವನ್ನು ಸೇರಿದಳು. ಹೆಣ್ಣಿನ ಉಡುಪಿನಿಂದ ತನ್ನನ್ನು ಅಲಂಕರಿಸುವಂತೆ ಹೇಳಿದಳು ಪಸಾಯಿತೆಗೆ. ನೂತನ ಉಡಿಗೆಯನ್ನು ರನ್ನಗನ್ನಡಿಯಲ್ಲಿ ನೋಡಿಕೊಂಡು ಮೆಚ್ಚಿದಳು ತನ್ನ ಸೌಂದರ್ಯಕ್ಕೆ ತಾನೇ. ಅನಂತರ ಯಾರೂ ತನ್ನನ್ನು ಓಲಾಲಿಸಬಾರದೆಂದು ಕಟ್ಟಾಣತಿಯನ್ನಿತ್ತು ಸಂಜೆ

ಯನ್ನಿಯೆ ಹೊರಟಳು ಕಾಡಿನಲ್ಲಿದ್ದ ಗುಡಿಯೆಡೆಗೆ.

ಸಂಜೆ ಕರಗಿ ಬೆಳುದಿಂಗಳು ಸುತ್ತಲೂ ಹಬ್ಬಿತ್ತು. ಅರ್ಜುನನಿಗಾಗಿ ಸುತ್ತಲೂ ಹುಡುಕಿದಳು. ಆಶೆ ನಿರಾಶೆಗಳ ಮಧ್ಯೆ ಅವಳು ಹುಡುಕುತ್ತಿದ್ದಾಗ ದೂರದಲ್ಲಿ ಅಗ್ನಿ ಕುಂಡದೆದುರು ಕುಳಿತ ಯತಿಮೂರ್ತಿ ಕಾಣಿಸಿದನು. ಚಿತ್ರಾಂಗದೆ ನೇರವಾಗಿ ಅವನೆಡೆಗೆ ಹೋಗಿ ಅಂದು ಬೆಳಗ್ಗೆ ಕೊಳದ ಬಳಿ ಸಂಚರಿಸಿದ ತನ್ನ ಅಣ್ಣನಿಂದ ಅರ್ಜುನನು ಯತಿವೇಷದಲ್ಲಿರುವುದನ್ನು ತಿಳಿದು ಪ್ರಣಯ ಭಿಕ್ಷೆಗಾಗಿ ಬಂದಿರುವುದಾಗಿ ಹೇಳಿದಳು. ಈ ಧೀರಾಂಗನೆಯ ಧೈರ್ಯದಾಲಾಪವನ್ನು ಕೇಳಿ ತಾನು ಬ್ರಹ್ಮಚರ್ಯವ್ರತದಿಂದಿರುವುದಾಗಿಯೂ ಅವಳಂಥ ಕಾಡು ಹೆಣ್ಣಿನಲ್ಲಿ ಸೌಂದರ್ಯವಾದರೂ ಏನಿದೆ ಎಂದು ಹೇಳಿ ಅವಳನ್ನು ತಿರಸ್ಕರಿಸಿದನು ಅರ್ಜುನ. ಈ ತಿರಸ್ಕಾರವನ್ನು ಕೇಳಿ ಅವಳ ಕ್ಷಾತ್ರ ಉರಿದೆದ್ದರೂ ನಿಗ್ರಹಮಾಡಿ ತಿರಸ್ಕಾರದಿಂದಾಗಿ ನೊಂದು ಶೋಕಭಾರದಿಂದ ಕುಸಿದು ಶಿವನ ಗುಡಿಗೆ ಹಿಂತಿರುಗಿದಳು.

ಜಗತ್ತು ನಿಷ್ಫಲವಾಗಿ ಕಂಡಿತು ಅವಳಿಗೆ. ಧರಿಸಿದ್ದ ಆಭರಣಗಳನ್ನು ತೆಗೆದು ಎಸೆದಳು. ಮದನಾರಿಯ ಮುಂದೆ ಮೈಚಾಚಿ ಕೈಮುಗಿದು ಮದನ ಕೃಪೆಗಾಗಿ ಬೇಡಿದಳು. ಆಕೆಗೆ ಸ್ವಲ್ಪ ಹೊತ್ತಿನಲ್ಲಿಯೇ ನಿದ್ದೆ ಹತ್ತಿತು. ಆ ನಿದ್ದೆ ಮದನ ಕೃಪೆಗಾಗಿ ಪ್ರಾರ್ಥಿಸುವ ತಪೋನಿದ್ರೆಯಾಗಿ ಪರಿಣಮಿಸಿತು. ಕನಸಿನಂತಿದ್ದ ಒಂದು ಸ್ಥಿತಿಯಲ್ಲಿ ಅವಳಿಗೆ ಮದನನು ಕಾಣಿಸಿಕೊಂಡನು. ಒಂದು ದಿನವಾದರೂ ಪೂರಾಗಿ ಅರ್ಜುನನ ಎದೆಯ ಕೋಟೆಯನ್ನು ಪುಡಿಮಾಡುವ ಶೃಂಗಾರ ಸೌಂದರ್ಯಗಳಿಗಾಗಿ ಮದನನನ್ನು ಪರಿಪರಿಯಾಗಿ ಬೇಡಿದಳು. ಒಂದು ದಿನವಲ್ಲ ಒಂದು

ತಿಂಗಳ ಕಾಲ ತುಂಬು ಶೃಂಗಾರದಿಂದ ಶೋಭಿಸುವಳೆಂದು ಹರಸಿದನು ಮದನ. ಆ ಸ್ವಪ್ನದರ್ಶನ ಮರೆಯಾದೊಡನೆ ಮಧುರಾನುಭವದ ಸಂತಸದಿಂದ ಉಬ್ಬಿ ಕಣ್ಣು ತೆರೆದಳು ಚಿತ್ರಾಂಗಿ. ಚಂದ್ರನ ಬೆಳಕು ಮಂದವಾಗುತ್ತಿತ್ತು. ದೂರದಲ್ಲಿ ತೇನೆ ಹಕ್ಕಿ ತನ್ನ ಇಂಚರದಿಂದ ಕಾಡನ್ನು ಮರುಧ್ವನಿಗೊಳಿಸುತ್ತಿತ್ತು.

**ಮೂರನೆಯ ಪರ್ವ:** ಮದನನ ವರದಿಂದ ಸೌಂದರ್ಯಪೂರ್ಣೆಯಾದ ಚಿತ್ರಾಂಗದೆ ಪ್ರಭಾತ ಕಾಲದಲ್ಲಿ ಸರೋವರದ ತೀರದಲ್ಲಿ ನಿಂತು ತನ್ನ ಸೌಂದರ್ಯವನ್ನು ಸರೋವರದ ನೀರಿನಲ್ಲಿ ನೋಡಿಕೊಂಡಳು. ಸರೋವರದ ಮತ್ತೊಂದು ದಡದಲ್ಲಿದ್ದ ಅರ್ಜುನನು ಅಪೂರ್ವ ಸೌಂದರ್ಯದಿಂದ ಶೋಭಿಸುತ್ತಿದ್ದ ಚಿತ್ರಾಂಗದೆಯನ್ನು ಕಂಡು ಮೋಹಪರವಶನಾದನು. ತನ್ನನ್ನು ಬಯಕೆಯ ಕಣ್ಣಿನಿಂದ ನೋಡುತ್ತಿದ್ದ ಅರ್ಜುನನನ್ನು ಕಂಡರೂ ಕಾಣದವಳಂತೆ ನೋಡಿ ಚಿತ್ರಾಂಗದೆ ಕಾಡಿನ ಮಧ್ಯೆ ಮರೆಯಾದಳು ಅರ್ಜುನನು ವ್ರತವನ್ನು ಮರೆತು ತನ್ನ ಹೃದಯವನ್ನು ಸೂರೆಗೈದ ತರುಣಿಯನ್ನು ಅರಸುತ್ತ ಶಿವನ ಗುಡಿಯ ಬಳಿ ಅವಳನ್ನು ಕಂಡನು. ಚಿತ್ರಾಂಗದೆ ತಾನು ತಪಸ್ವಿನಿಯೆಂದು ಹೇಳಿ ಆ ಯತಿಪತಿಯನ್ನು ಸ್ವಾಗತಿಸಿದಳು. ಅರ್ಜುನನು ತನ್ನ ಯತಿರೂಪಕ್ಕೆ ತಾನೆ ನಾಚಿದನು. ತಾನು ಯತಿಯಲ್ಲ, ಕ್ಷತ್ರಿಯನೆಂದು ಹೇಳಿ ಅವಳು ಯಾವ ಕಾರಣಕ್ಕಾಗಿ ತಪಸ್ವಿನಿಯಾಗಿರುವುದೆಂದು ಕೇಳಿದನು. ಅವಳು ಹೇಳಿದಳು, ಜಗತ್ಪ್ರಸಿದ್ಧ ವೀರನನ್ನು ಪಡೆಯುವುದಕ್ಕಾಗಿ ಎಂದು. ಆ ವೀರನ ಹೆಸರನ್ನು ತಿಳಿಯಬಯಸಿದನು ಅರ್ಜುನ. ಅವನ ಕುತೂಹಲವನ್ನು ಕೆರಳಿಸಿ ಅರ್ಜುನನೇ ಆ ವೀರನೆಂದಳು. ಒಡನೆಯೆ ಯತಿವರ್ಯನು ತಾನೆ ಆ ಅರ್ಜುನನೆಂದು ಹೇಳಿ ಅವಳ ಪ್ರಣಯಭಿಕ್ಷುಗಾಗಿ ಶರಣಾದನು. ಆಗ

ಚಿತ್ರಾಂಗದೆಗೆ ಸಂತೋಷದಿಂದ ಎದೆಯುಬ್ಬಿದರೂ ಸ್ತ್ರೀಸಹಜವಾದ ಸಂಯಮದಿಂದ "ಹನ್ನೆರಡು ವರ್ಷದ ಬ್ರಹ್ಮಚರ್ಯವ್ರತವನ್ನು ಬಿಟ್ಟು ಪತಿತನಾಗಬೇಡ" ಎಂದು ವಿವೇಕ ಹೇಳಿದಳು. ಈ ಹಿತೋಪದೇಶವನ್ನು ಬಾಯಲ್ಲಿ ಹೇಳಿದರೂ ಅವಳ ಹೃದಯ ಮನ್ಮಥಬಾಧೆಯಿಂದ ಚಡಪಡಿಸುತ್ತಿತ್ತು. ತನ್ನ ಜೀವನದ ಪರಮ ಪುರುಷಾರ್ಥ ರೂಪಿಣಿಯೇ ಅವಳೆಂದು ಹೇಳಿ ಅವಳ ಪ್ರಣಯಕ್ಕಾಗಿ ಅರ್ಜುನನು ಪರಿಪರಿಯಾಗಿ ಬೇಡಿದನು. ಅವನ ತೃಷಾಪೂರ್ಣ ದೃಷ್ಟಿಯಲ್ಲಿ ಅವಳ ಸಂಯಮದ ಕಟ್ಟು ಒಡೆದು ಹೋಯಿತು. "ಪ್ರೇಮನಿಧಿ, ಪ್ರಾಣೇಶ, ಸೂರೆಗೊಳ್ಳೆನ್ನ ಸರ್ವಸ್ವಮುಮಂ" ಎಂದು ತನ್ನನ್ನು ಅರ್ಪಿಸಿಕೊಂಡಳು.

ಅರ್ಜುನ ಚಿತ್ರಾಂಗದೆಯರು ಮಧುಮಯ ಸುಖದಲ್ಲಿರತೊಡಗಿದರು. ದಿನಗಳು ಉರುಳಿದುವು. ಅರ್ಜುನನು ಪಾಂಡವರ ಕಥೆಯನ್ನು ಅವಳಿಗೆ ಹೇಳಿದನು. ಅವಳ ಹೆಸರನ್ನೂ ಅವಳ ತಂದೆ, ತಾಯಿ. ಊರು ಇವುಗಳ ವಿಚಾರವನ್ನೂ ತಿಳಿಯುವ ಬಯಕೆ ಅರ್ಜುನನಿಗೆ ಹೆಚ್ಚಾಯಿತು. ಎಂದಾದರೊಂದು ದಿನ ಹೇಳುವೆನೆಂದು ಆ ಮಾತನ್ನು ಮರೆಸಿದಳು ಚಿತ್ರಾಂಗದೆ. ಒಂದು ದಿನ ಅವರಿಬ್ಬರೂ ಕಾಡಿನ ಗಿರಿಯ ತುದಿಯನ್ನೇರಿ ಸುತ್ತಲೂ ಹಬ್ಬಿದ್ದ ಹಸುರು ಸೌಂದರ್ಯವನ್ನು ಸವಿದರು. ಉತ್ತರ ದಿಕ್ಕನ್ನು ಕಂಡೊಡನೆ ಅರ್ಜುನನಿಗೆ ತನ್ನ ರಾಜ್ಯ, ಅಣ್ಣ ತಮ್ಮಂದಿರ ನೆನಪು ಮೂಡಿ ಅತ್ತ ಕಡೆ ಬೇಗನೆ ಹೋಗಬೇಕೆಂಬ ಆಸೆ ಉದಿಸಿತು. "ನಿನ್ನ ಮನೆಯೆಲ್ಲಿ? ನಿನ್ನ ತಂದೆ ತಾಯಿ ಅಕ್ಕ ತಂಗಿ ಬಂಧು ಬಳಗದವರಾರೂ ಇಲ್ಲವೆ?" ಎಂದು ಮತ್ತೆ ಚಿತ್ರಾಂಗದೆಯನ್ನು ಕೇಳಿದನು ಅರ್ಜುನ. ಯಾವುದಕ್ಕೂ ಉತ್ತರ ಹೇಳದೆ.ಒಂದು ತಿಂಗಳ ಅವಧಿ ಮುಗಿದುದನ್ನು ನೆನೆದು ಅವೊಂದು

ದಿನ ತನ್ನೊಡನೆ ಇರಬೇಕೆಂದು ಅರ್ಜುನನನ್ನು ಪ್ರಾರ್ಥಿಸಿದಳು ಚಿತ್ರಾಂಗದೆ. ಅನಂತರ ಗಂಡುಡುಗೆಯಲ್ಲಿ ಅರ್ಜುನನನ್ನು ಕಂಡಂದಿನಿಂದ ನಡೆದ ತನ್ನ ಜೀವನ ವೃತ್ತಾಂತವನ್ನು ಅವನಿಗೆ ಹೇಳಿದಳು. ಆ ಸಮಯಕ್ಕೆ ಬಿರುಗಾಳಿ ಎದ್ದು ಬಿರುಸಾದ ಮಳೆ ಸುರಿಯಲಾರಂಭಿಸಿತು. ಇಬ್ಬರೂ ಶಿವನ ಗುಡಿಯನ್ನು ಸೇರಿದರು. ಹೊರಗೆ ಸಿಡಿಲ್ಮಿಂಚು ಗುಡುಗಿನಿಂದ ಕೂಡಿದ ಭೀಷಣ ಮಳೆ ಅಪ್ಪಳಿಸುತ್ತಿರಲು ಅರ್ಜುನನು ಚಿತ್ರಾಂಗದೆಗೆ ಮತ್ತೆ ಆರು ತಿಂಗಳಲ್ಲಿ ಹಿಂತಿರುಗಿ ಬಂದು ಕಾಣುವೆನೆಂದು ಮಾತುಕೊಟ್ಟನು. ಕಂಬನಿ ಸೂಸುತ್ತಿದ್ದ ಅವಳನ್ನು ಕಷ್ಟದಿಂದ ಸಂತೈಸಿದನು. ಆ ಮಧುಮಯ ರಾತ್ರಿ ಕಳೆಯಿತು.

**ನಾಲ್ಕನೆಯ ಪರ್ವ:** ಬೆಳಗಾಗುವ ಮೊದಲೆ ಎದ್ದು ಇನ್ನೂ ಮಲಗಿದ್ದ ತನ್ನ ಪ್ರೇಯಸಿ ಏಳುವ ಮೊದಲೆ ಹೊರಡಬೇಕೆಂದು ಅವಳ ಬೆರಳಿಗೆ ನೆನಪಿಗಾಗಿ ಉಂಗುರವನ್ನು ತೊಡಿಸಿ ಕರುಣೆಯಿಂದ ಅವಳನ್ನು ನೋಡುತ್ತ ಬಿಡಲಾರದೆ ಬಿಟ್ಟು ಅರ್ಜುನನು ಹೊರಟನು.

ಕಿರೀಟಿ ಅತ್ತ ಹೊರಟು ಹೋದ ಮೇಲೆ ಚಿತ್ರಾಂಗದೆ ನಿದ್ದೆಯಿಂದೆದ್ದು ಅವನನ್ನು ಕಾಣದೆ ಸುತ್ತಲೆತ್ತಲೂ ಅವನನ್ನು ಹುಡುಕಿದಳು. ಅಲ್ಲಲ್ಲಿ ನಿಂತು ಕೂಗಿ ಕರೆದಳು. ಎಲ್ಲಿಯೂ ಅರ್ಜುನನನ್ನು ಕಾಣದೆ ಹತಚೇತಸಳಾಗಿ ಶಿವನ ಗುಡಿಗೆ ಹಿಂತಿರುಗಿದಳು. ಆರು ತಿಂಗಳಲ್ಲಿ ಬಂದು ಕಾಣುವೆನೆಂದು ಹೇಳಿದ ಅರ್ಜುನನ ಮಾತನ್ನು ನೆನೆದು ಕೈಯಲ್ಲಿದ್ದ ಉಂಗುರವನ್ನು ರಕ್ಷಿಸಿಕೊಂಡು ಗರ್ಭಿತ ರಹಸ್ಯೆಯಾಗಿ ತನ್ನ ಶಿಬಿರವನ್ನು ಸೇರಿದಳು.

ಸೈನ್ಯವು ಚಿತ್ರಾಂಗದೆಯ ಆಣತಿಯಂತೆ ಪ್ರಯಾಣ ಹೊರಟು

ಮಣಿಪುರವನ್ನು ಸೇರಿತು. ದಿಗ್ವಿಜಯಕ್ಕಾಗಿ ಹೊರಟ ಸೈನ್ಯ ಹಿಂತಿರುಗಿದುದನ್ನು ಕಂಡು ರಾಜಧಾನಿಯ ಚಿತ್ರಾಂಗದೆಗೆ ಸಂಭ್ರಮದ ಸ್ವಾಗತವನ್ನಿತ್ತಿತು. ಆ ಸಂಭ್ರಮದಲ್ಲಿ ಅನಾಸಕ್ತಿಯಿಂದ ಭಾಗವಹಿಸಿ ಅರಮನೆಯನ್ನು ಸೇರಿ ತಂದೆ ತಾಯಿಗಳಿಗೆ ನಮಿಸಿ ತನ್ನ ಪ್ರಾಸಾದವನ್ನು ಸೇರಿದಳು. ಅವಳ ಅಪ್ರಸನ್ನತೆಯನ್ನು ಕಂಡು ಪರಿವಾರದವರು ಏನೇನೋ ಕಲ್ಪನೆಯ ಊಹೆಯನ್ನು ಕಟ್ಟಿದರು. ದಿನ ಕಳೆದಂತೆ ಅರ್ಜುನನ ಹಂಬಲ ಹೆಚ್ಚಾಯಿತು ಚಿತ್ರಾಂಗದೆಗೆ. ದಿನ ದಿನದ ಕಾರ್ಯದಲ್ಲಿ ಅವಳಿಗೆ ಆಸಕ್ತಿ ಕಡಮೆಯಾಯಿತು. ಯೌವನದಿಂದ ತುಂಬಿದ ಮಗಳಿಗೆ ಮದುವೆಯ ಸಿದ್ಧ ಷದವೆಂದು ತಿಳಿದು ತಂದೆತಾಯಿಗಳು ಮಗಳ ಮದುವೆಗೆ ಸಿದ್ಧಗೊಳಿಸತೊಡಗಿದರು. ಆಗ ತನಗೆ ನಿರ್ಜನಾರಣ್ಯದಲ್ಲಿ ಗಾಂಧರ್ವ ವಿಧಿಯಿಂದ ಶಿವನ ಸಾಕ್ಷಿಯಲ್ಲಿ ಮದುವೆಯಾಗಿದೆಯೆಂದು ನಡುಗುತ್ತ ತಾಯಿಗೆ ಹೇಳಿದಳು ಚಿತ್ರಾಂಗದೆ. ಈ ಮಾತುಗಳನ್ನು ಕೇಳಿ ಖೇದದೊಡನೆ ಕೋಪವೂ ಮೂಡಿ ತಮ್ಮ ವಂಶದ ಹೆಸರನ್ನು ಹಾಳುಮಾಡಿದುದಾಗಿ ಹೇಳಿ ನೊಂದುಕೊಂಡಳು ತಾಯಿ. ಆಗ ಚಿತ್ರಾಂಗದೆ ತಾನು ಮದುವೆಯಾದುದು ಪುರುಷ ಶ್ರೇಷ್ಠನನ್ನೆಂದೂ ಇನ್ನು ಆರು ತಿಂಗಳಲ್ಲಿ ಕರೆತರುವುದಾಗಿಯೂ ತಾಯಿಗೆ ಭರವಸೆ ಕೊಟ್ಟಳು. ತಾನು ವರಿಸಿದ ವೀರನು ಅರ್ಜುನನೆಂದು ಹೆಸರನ್ನು ಹೇಳಲಿಲ್ಲ. ಗರ್ಭಿತ ರಹಸ್ಯವಾಗಿಯೆ ಇದ್ದಳು.

ಆರು ತಿಂಗಳು ಕಳೆಯಿತು. ನಿಯಮಿತವಾದ ದಿನದಂದು ಚಿತ್ರಾಂಗದೆ ತನ್ನ ಸಖಿಯರೊಡನೆ ಅರಣ್ಯದಲ್ಲಿದ್ದ ಶಿವನ ಗುಡಿಗೆ ಹೋಗಿ ಅರ್ಜುನನಿಗಾಗಿ ಕಾದಳು. ಅವನು ಬಂದೊಡನೆ ಸ್ವಾಗತಿಸಿ ಮಣಲೂರಿಗೆ ಕರೆದೊಯ್ದು ತಂದೆತಾಯಿಗಳನ್ನೂ ಪ್ರಜೆ

ಗಳನ್ನು ಸಂತೋಷಗೊಳಿಸಬೇಕೆಂದು ಹಾರೈಸಿದಳು. ಆದರೆ ಆ ದಿನ ಕಾಡಿನ ಪ್ರದೇಶದಲ್ಲಿ ಎಲ್ಲಿ ಹುಡುಕಿದರೂ ಅರ್ಜುನನು ಕಾಣಿಸಲಿಲ್ಲ. ತಂದೆತಾಯಿಗಳಿಗೆ ಕೊಟ್ಟ ವಚನವನ್ನು ನೆನೆದು ದುಃಖದಿಂದ ಕೊರಗಿದಳು. ಮತ್ತೆ ಆಶಾವಾದಿಯಾಗಿ ಹತ್ತು ದಿನಗಳವರೆಗೆ ನರನಿಗಾಗಿ ಕಾದು ಅವನ ಸುಳಿವನ್ನು ಕಾಣದೆ ರೋಷ ದುಃಖಗಳ ದ್ವಂದ್ವತೆಯಲ್ಲಿ ಬೆಂದು ಭೀಷಣ ಮನಃಸ್ಥಿತಿ ಯಲ್ಲಿ ಮಣಿಪುರಕ್ಕೆ ಹಿಂತಿರುಗಿದಳು.

ಐದನೆಯ ಪರ್ವ: ಅರ್ಜುನನು ಬಾರದುದರಿಂದ ಅಪಾರ ದುಃಖವಾಯಿತು. ದಿನದಿನಕ್ಕೂ ಬೆಳೆಯುತ್ತಿದ್ದ ಗರ್ಭದಿಂದಾಗಿ ಅಪವಾದಭೀತಿಯೂ ಅವಳ ಕೊರಳನ್ನು ಬಿಗಿಯಿತು. ಇದರಿಂದ ಪಾರಾಗಲು ಆತ್ಮಹತ್ಯೆ ಮಾಡಲೆಂದು ಒಂದು ರಾತ್ರಿ ಸಮುದ್ರ ತೀರಕ್ಕೆ ಒಂಟಿಯಾಗಿ ಹೊರಟಳು. ಸಮುದ್ರದಲ್ಲಿ ತನ್ನನ್ನು ಅರ್ಪಿಸಿಕೊಳ್ಳಲು ನೀರಿಗೆ ಹಾರಿದಳು. ಆದರೆ ಸಮುದ್ರದ ಅಲೆ ಗಳು ಅವಳನ್ನು ತೀರಕ್ಕೆ ಹಿಂದೂಡಿದುವು. ಆಗ ಸಮುದ್ರ ಮೂರ್ತಿ ಕಾಣಿಸಿಕೊಂಡು, ಗರ್ಭವನ್ನು ರಕ್ಷಿಸಬೇಕೆಂದೂ ದಾಂಪತ್ಯ ಜೀವನದ ಆದರ್ಶ ಮಗುವಿನ ಮೇಲಣ ಪ್ರೇಮವೆಂದೂ ಹುಟ್ಟುವ ಮಗನನ್ನು ರಕ್ಷಿಸಿ ತಪಸ್ವಿನಿಯಾಗಬೇಕೆಂದೂ ಹೇಳಿತು. ಆ ಆಶೀರ್ವಾದವಾಣಿಯನ್ನು ಹೃದಯದಲ್ಲಿ ಧರಿಸಿ ಅರಮನೆಗೆ ಹಿಂದಿರುಗಿದಳು.

ಪೂರ್ಣಗರ್ಭಿಣಿಯಾಗಿ ಗಂಡು ಶಿಶುವಿಗೆ ಜನ್ಮವಿತ್ತಳು. ಕ್ಷತ್ರಿಯೋಚಿತ ರಾಜಸಂಭ್ರಮದಿಂದ ಶಿಶುವಿಗೆ ಬಭ್ರುವಾಹನ ನೆಂಬ ಹೆಸರಾಯಿತು. ಮಗನನ್ನು ಪೋಷಿಸುತ್ತ ಅವನ ವಿದ್ಯೆ ಯಲ್ಲಿ ಆಸಕ್ತಳಾದ ಚಿತ್ರಾಂಗದೆಗೆ ಪಾರ್ಥನನ್ನು ಬಹುಮಟ್ಟಿಗೆ ಮರೆಯುವುದು ಸಾಧ್ಯವಾಯಿತು. ಬಭ್ರುವಾಹನನು ಮಹಾ

ವೀರನೂ ತೇಜಸ್ವಿಯೂ ಆಗಿ ಬೆಳೆದನು. ಚಿತ್ರವಾಹನನು ಕಾಲವಾಗಲು ಚಿತ್ರಾಂಗದೆಯು ರಾಜ್ಯಸೂತ್ರವನ್ನು ವಹಿಸಿದಳು. ಮಗನು ಪ್ರಾಯಕ್ಕೆ ಬಂದು ರಾಜನೀತಿಯನ್ನೂ ಧರ್ಮವೃತ್ತಿಯನ್ನೂ ಅರಿತವನಾದಮೇಲೆ ರಾಜ್ಯಭಾರವನ್ನು ಅವನಿಗೆ ವಹಿಸಿ ಪಟ್ಟಣದ ಹೊರವಳಯದಲ್ಲಿದ್ದ ಉದ್ಯಾನದಲ್ಲಿ ತಪಸ್ವಿನಿಯಾಗಿ ನೆಲಸಿದಳು. ಅವಳ ದಿಗ್ದರ್ಶನದಲ್ಲಿ ಬಭ್ರುವಾಹನನು ಆದರ್ಶ ವೀರನೂ ಪರಾಕ್ರಮಿಯೂ ಆದ ರಾಜನಾದನು. ರಾಜ್ಯವೆಲ್ಲ ಭೂಸ್ವರ್ಗವೆಂಬಂತೆ ಸಂತೋಷದಿಂದ ಕೂಡಿದ್ದಿತು.

ಆರು ತಿಂಗಳ ಅವಧಿಗೆ ಸರಿಯಾಗಿ ಬಾರದೆ ಎರಡು ತಿಂಗಳು ಹೊತ್ತಾಗಿ ಬಂದ ಅರ್ಜುನನು ಶಿವನ ಗುಡಿಯಲ್ಲಿ ಚಿತ್ರಾಂಗದೆಯನ್ನು ಕಾಣದೆ ಮಮ್ಮಲ ಮರುಗಿ ಹಸ್ತಿನಾವತಿಗೆ ಹಿಂತಿರುಗಿದನು. ಕಾಲ ಉರುಳಿ ಭಾರತ ಯುದ್ಧವೂ ಪ್ರಾರಂಭವಾಯಿತು. ಹೆಸರನ್ನೂ ತಿಳಿಯದ ಚಿತ್ರಾಂಗದೆಯ ನೆನಪು ಅವನಿಗೆ ಬರಲಿಲ್ಲ. ಭಾರತ ಯುದ್ಧವು ಪ್ರಾರಂಭವಾದುದನ್ನು ಕೇಳಿದ ಚಿತ್ರಾಂಗದೆ ಪಾಂಡವರ ಮೇಲ್ಮೆಗಾಗಿ ಪ್ರಾರ್ಥಿಸಿದಳು. ತಾಯಿಯ ವ್ರತವನ್ನು ತಿಳಿದು ಬಭ್ರುವಾಹನನು ಯುದ್ಧದಲ್ಲಿ ಪಾಂಡವರಿಗೆ ನೆರವಾಗುವುದಾಗಿ ತನ್ನ ಉತ್ಸಾಹವನ್ನು ತಾಯಿಗೆ ಹೇಳಿದನು. ಕರೆಯದೆ ಹೋಗುವುದು ರಾಜರಿಗೆ ಮರ್ಯಾದೆಯಲ್ಲವೆಂದು ಮಗನಿಗೆ ವಿವೇಚನೆ ಹೇಳಿದಳು ತಾಯಿ

ಭಾರತ ಯುದ್ಧವು ಮುಗಿದು ಅಶ್ವಮೇಧದ ಯಜ್ಞಾಶ್ವವನ್ನು ಬೆನ್ನಟ್ಟಿ ಅರ್ಜುನನು ಹೊರಟನು. ನೀಲಧ್ವಜ, ಪ್ರಮೀಳೆ, ಹಂಸಧ್ವಜ ಮೊದಲಾದ ವೀರರನ್ನು ಗೆದ್ದು ಮಣಿಪುರಕ್ಕೆ ಬಂದನು. ಆ ಪುರದ ವೈಭವವನ್ನು ಕಂಡು ಆ ನಾಡಿನ ಅರಸನಾರೆಂದು ತಿಳಿಯುವ ಆಸೆಯಾಯಿತು ಅವನಿಗೆ. ಆಗ ಹಂಸ

ಧ್ವಜನು. ಮಣಿಪುರದ ಅರಸನು ಮಹಾವೀರ ಬಭ್ರುವಾಹನ ನೆಂದೂ ಅವನ ತಾಯಿಯೆ ಅವನ ಗುರುವೆಂದೂ, ಅವಳು ತಪಸ್ವಿನಿಯಾಗಿರುವಳೆಂದೂ ಹೇಳಿ, ಅವಳು ಒಂದು ದಿನ ಬೇಟೆ ಯಾಡಲು ಹೋಗಿ ಯತಿವೇಷದಲ್ಲಿದ್ದ ಗಂಧರ್ವನನ್ನು ವರಿಸಿ ಪಡೆದ ಮಗನೆ ಬಭ್ರುವಾಹನನೆಂದು ಜನಜನಿತವಾದ ವಿಚಾರ ವನ್ನು ಅರ್ಜುನನಿಗೆ ತಿಳಿಸಿದನು.

ಬಹುವರ್ಷಗಳ ಹಿಂದೆ ಶಿವನ ಗುಡಿಯಲ್ಲಿ ತಾನು ಪ್ರೀತಿಸಿದ ತರುಣಿಯನ್ನು ನೆನೆದು ವೇಷ ಮರೆಸಿಕೊಂಡು ಚಿತ್ರಾಂಗದೆ ವಾಸಿಸುತ್ತಿದ್ದ ಪರ್ಣಕುಟಿಗೆ ಹೋಗಿ ಪೂಜೆಯಲ್ಲಿ ನಿರತಳಾಗಿದ್ದ ಚಿತ್ರಾಂಗದೆಯನ್ನು ಅರ್ಜುನನು ನೋಡಿದನು. ಅವಳ ವ್ಯಕ್ತಿತ್ವ ದಲ್ಲಿ ಗೌರವ ಮೂಡಿತು. ಅವನ ಮನಸ್ಸಿನ ಎಣಿಕೆ ಸರಿಯುಲ್ಲ ವೆಂದು ತಿಳಿದು ತನ್ನ ಪಾಳಯಕ್ಕೆ ಹಿಂತಿರುಗಿದನು.

ತನ್ನ ನಾಡಿಗೆ ಬಂದ ಅಶ್ವಮೇಧದ ಕುದುರೆಯನ್ನು ಹಿಡಿದು ತರಿಸಿ ಕಟ್ಟಿಹಾಕಿಸಿದ ಬಭ್ರುವಾಹನನು ಪರ್ಣಶಾಲೆಯಲ್ಲಿದ್ದ ತಾಯಿಯ ಬಳಿಗೆ ಹೋದನು ಆಶೀರ್ವಾದ ಪಡೆಯುವುದಕ್ಕಾಗಿ. ಅರ್ಜುನನೊಡನೆ ಯುದ್ಧ ಮಾಡುವೆನೆಂಬ ಮಗನ ಕಲಿತನ ವನ್ನು ಮೆಚ್ಚಿ ಪ್ರಶಂಸಿಸಿ ಅನಂತರ ತನ್ನ ಅಭಿಪ್ರಾಯವನ್ನು ಹೇಳಿದಳು. ಶ್ರೀ ಕೃಷ್ಣನೇ ಆ ಯಜ್ಞಕ್ಕೆ ರಕ್ಷಕ. ಧರ್ಮರಾಯನ ತಮ್ಮನೆ ಅಶ್ವರಕ್ಷೆಗೆ ಬಂದಿದ್ದಾನೆ. ಬಾಲ್ಯದಲ್ಲಿ ಅರ್ಜುನನ ನಾಮಜಪದಿಂದ ಬಿಲ್ಲಿನ ವಿದ್ಯೆಯನ್ನು ತಾನು ಕಲಿತುದುದರಿಂದ ಅರ್ಜುನನು ತನಗೆ ಗುರು. ಮಗನಿಗೆ ಬಿಲ್ಲಿನ ವಿದ್ಯೆಯನ್ನು ಹೇಳಿಕೊಟ್ಟವಳು ತಾನು. ಆದ್ದರಿಂದ ಅರ್ಜುನ ಗುರುವಿಗೆ ಗುರುವಾದನು. ಗುರು ಪಿತೃವಿಗೆ ಸಮ. ಆದ್ದರಿಂದ ಪಿತೃ ಸಮಾನ ನಾದ ಅರ್ಜುನನಿಗೆ ಕುದುರೆಯನ್ನು ಒಪ್ಪಿಸಬೇಕು. ಅವನನ್ನು

ಗೌರವಿಸಬೇಕು. ಹೀಗೆಂದು ತಾಯಿ ಮಗನಿಗೆ ಹಿತವಚನ ವನ್ನಿತ್ತಳು.

ಮರುದಿನ ಪಾರ್ಥನು ಯುದ್ಧಕ್ಕೆ ಸಿದ್ಧನಾಗಿದ್ದನು. ಬಭ್ರುವಾಹನನು ತಾಯಿಯ ಆದೇಶದಂತೆ ಕಳಶಕನ್ನಡಿ ಹಿಡಿದ ಕನ್ನೆಯರ ಸಮೂಹದೊಡನೆ ನಗರದ ಜನರೊಡನೆ ಪಾರ್ಥನನ್ನು ಇದಿರುಗೊಳ್ಳಲು ಹೊರಟನು. ಯುದ್ಧಕ್ಕೆ ಬದಲಾಗಿ ಕನ್ಯಾವೃಂದದೊಡನೆಯೂ ಜನ ಸಮೂಹದೊಡನೆಯೂ ಬರುತ್ತಿದ್ದ ಬಭ್ರುವಾಹನನನ್ನು ದೂರದಿಂದಲೇ ಕಂಡು ಪಾರ್ಥನ ಸೈನ್ಯವು ಅಪಹಾಸ್ಯ ಮಾಡುತ್ತ ಗೊಳ್ಳೆಂದು ನಗತೊಡಗಿತು ಬಭ್ರುವಾಹನನು ಬಂದು ಸಾಷ್ಟಾಂಗ ನಮಸ್ಕಾರ ಮಾಡಲು ಜಯದ ಸೊಕ್ಕಿನಲ್ಲಿದ್ದ ಅರ್ಜುನನು ಅವನನ್ನು ತಿರಸ್ಕರಿಸಿ ಅವಮಾನ ಮಾಡಿದನು. ಬಭ್ರುವಾಹನನು ಕೋಪಗೊಂಡು ತಾಯಿಯ ಮಾತನ್ನು ಕೇಳಿ ಕೆಟ್ಟೆನೆಂದು ತನ್ನನ್ನು ತಾನು ಶಪಿಸಿಕೊಂಡು ಮಂಗಳ ದ್ರವ್ಯಾದಿ ಸಮಸ್ತವಸ್ತುಗಳನ್ನೂ ಅರಮನೆಗೆ ಕಳುಹಿಸಿ ಯುದ್ಧಕ್ಕೆ ಸಿದ್ಧನಾದನು.

ಆರನೆಯ ಪರ್ವ: ಪಾರ್ಥನ ಸೈನ್ಯಕ್ಕೂ ಅರ್ಜುನನ ಸೈನ್ಯಕ್ಕೂ ಭಯಂಕರ ಹೋರಾಟ ಪ್ರಾರಂಭವಾಯಿತು. ಚಿತ್ರಾಂಗದೆ ತನ್ನ ಪರ್ಣಕುಟಿಯಲ್ಲಿ ತನ್ನ ಅಭೀಷ್ಟಸಿದ್ಧಿಗಾಗಿ ಪ್ರಾರ್ಥಿಸುತ್ತಿದ್ದಳು. ಹೊತ್ತೇರಿದು ಕತ್ತಲಾಗುತ್ತಿದ್ದರೂ ಮಗನು ಯಾವ ಶುಭ ಸುದ್ದಿಯನ್ನೂ ತಾರದುದನ್ನು ಕಂಡು ಅವಳ ಮನಸ್ಸು ಅಸ್ವಸ್ಥವಾಯಿತು. ರಾತ್ರಿ ಭೂಮಿಯನ್ನು ಆವರಿಸುತ್ತಿತ್ತು. ಚಿತ್ರಾಂಗದೆ ಪೂಜೆಯಲ್ಲಿ ನಿರತಳಾದಳು. ಅವಳ ಧ್ಯಾನಸ್ಥಿತಿಯಲ್ಲಿ ದಿವ್ಯಾಕೃತಿಯೊಂದು ಗೋಚರಿಸಿ ಪಾರ್ಥನಿಗೂ ಬಭ್ರುವಾಹನನಿಗೂ ನಡೆದ ಘೋರ ಯುದ್ಧವನ್ನು ತಿಳಿಸಿ. ಬೇಗನೆ

ಹೋಗದಿದ್ದರೆ ಪಾರ್ಥನು ಹತನಾಗುವನೆಂದು ಎಚ್ಚರಿಸಿ, ಪತಿ ಸುತರ ಹಿತವನ್ನು ಸಾಧಿಸುವ ಶುಭಂಕರಿಯಾಗಬೇಕೆಂಬ ಆದೇಶವನ್ನಿತ್ತಿತು. ಚಿತ್ರಾಂಗದೆ ಅರಮನೆಯನ್ನು ಸೇರಿ ಬಿಳಿಯ ಕುದುರೆಯನ್ನೇರಿ ಬಿಳಿಯ ಶಾಂತಿಪತಾಕೆಯನ್ನು ಹಿಡಿದು ರಣರಂಗದೆಡೆಗೆ ಧಾವಿಸಿದಳು. ಶಾಂತಿಸೂಚಕವಾಗಿ ಸುಸ್ವರದ ತೂರ್ಯವನ್ನೂದಿದಳು. ಯುದ್ಧ ಭೂಮಿಯಲ್ಲಿ ಅನೇಕರು ಮಡಿದು ರಕ್ತದ ಮಡುವಾಗಿತ್ತು. ಬಿಳಿಯ ಸೀರೆಯನ್ನುಟ್ಟು ಜಪಮಣಿ ಮಾಲೆಯನ್ನು ಧರಿಸಿ ಬಿಳಿಯ ಕುದುರೆಯನ್ನೇರಿ ಬರುತ್ತಿದ್ದ ಚಿತ್ರಾಂಗದೆಯನ್ನು ಮೊದಲು ಗುರುತಿಸದಿದ್ದರೂ ಕ್ರಮೇಣ ಸೈನಿಕರು ಗುರುತಿಸಿದರು. ಅಷ್ಟು ಹೊತ್ತಿಗಾಗಲೆ ಅವಳ ದೇಹವನ್ನು ಬಾಣಗಳು ಮುತ್ತಿದ್ದುವು. ಆ ಸ್ಥಿತಿಯಲ್ಲಿಯೆ ಅರ್ಜುನ ಬಭ್ರುವಾಹನರು ಕಾದಾಡುವ ರಣಭೂಮಿಯ ಮಧ್ಯೆ ಹೋಗಿ ಕುದುರೆಯಿಂದ ಧುಮುಕಿ ಮಗನನ್ನು ಬಾಣಪ್ರಯೋಗ ಮಾಡಬಾರದೆಂದು ಬೇಡಿದಳು. ಅವಳ ದೇಹವನ್ನು ನಾಟಿದ್ದ ಬಾಣದ ನೋವನ್ನು ಸಹಿಸಲಾರದೆ ಧೊಪ್ಪೆಂದು ಬಿದ್ದಳು. ಬಭ್ರುವಾಹನನೂ ಅರ್ಜುನನೂ ಇತರ ಸೈನಿಕರೂ ಸುತ್ತಲೂ ಸೇರಿದರು. ಬಭ್ರುವಾಹನನು ತಾಯಿಯ ಪಾದಗಳೆಡೆ ಬಿದ್ದು ರೋದಿಸಲಾರಂಭಿಸಿದನು. ಅರ್ಜುನನು ಅನುಕಂಪದಿಂದ ನೀರನ್ನು ತರಿಸಿ ಶೈತ್ಯೋಪಚಾರವನ್ನು ಮಾಡಿದನು. ಚಿತ್ರಾಂಗದೆ ದುಃಖಿಸುತ್ತಿದ್ದ ಮಗನನ್ನು ಸಂತೈಸಿ, ತಾನು ದೇಹವನ್ನು ತ್ಯಜಿಸುವುದಾದರೂ ತಂದೆಯನ್ನು ಕೊಲ್ಲುತ್ತಿದ್ದ ಮಹಾಪಾತಕದಿಂದ ಅವನನ್ನು ಪಾರುಮಾಡಿಸುವುದಾಗಿ ಹೇಳಿದಳು. ತನ್ನ ಕೈಯಲ್ಲಿದ್ದ ಉಂಗುರವನ್ನು ಅರ್ಜುನನಿಗೆ ಕೊಟ್ಟು, ತನ್ನ ಚರಿತ್ರೆಯನ್ನೆಲ್ಲವನ್ನೂ ಸಂಕ್ಷೇಪವಾಗಿ ಹೇಳಿ ಶಿವನಾಮವನ್ನು ಸ್ಮರಿಸುತ್ತ ಕಣ್ಣು ಮುಚ್ಚಿದಳು.

## ೩ ಪಾತ್ರ ನಿರೂಪಣೆ

**ಚಿತ್ರಾಂಗದೆ:** ಚಿತ್ರಾಂಗದಾ ಕಾವ್ಯದ ಮೂರು ಮುಖ್ಯ ಪಾತ್ರಗಳೆಂದರೆ ಚಿತ್ರಾಂಗದೆ, ಅರ್ಜುನ ಮತ್ತು ಬಭ್ರುವಾಹನ. ಚಿತ್ರಾಂಗದೆಯು ಕಾವ್ಯದ ನಾಯಿಕಿ. ಅವಳು ಮಣಿಪುರದ ರಾಜ ಚಿತ್ರವಾಹನನ ಏಕಮಾತ್ರ ಪುತ್ರಿ. ಆ ರಾಜವಂಶದಲ್ಲಿ ಒಬ್ಬ ಗಂಡು ಮಗನು ಹುಟ್ಟುವನೆಂಬುದು ಈಶ್ವರನ ವರ. ಆ ವರಕ್ಕೆ ಅಪವಾದವೆಂಬಂತೆ ಚಿತ್ರಾಂಗದೆ ಹೆಣ್ಣಾಗಿ ಹುಟ್ಟಿದ್ದಳು. ರಾಜನು ಮಗಳಿಗೆ ರಾಜಕುಮಾರನಿಗೆ ಯೋಗ್ಯವಾದ ಬಿಲ್ಲುಬಾಣಗಳ ವಿದ್ಯೆಯಲ್ಲಿ ಶಿಕ್ಷಣವಿತ್ತು ಗಂಡು ಮಗನಂತೆಯೆ ಬೆಳೆಸಿದನು. ಗಂಡಿನ ಸ್ವಾತಂತ್ರ್ಯವನ್ನು ಪಡೆದು ಬೆಳೆದಳು ಚಿತ್ರಾಂಗದೆ. ಒಂದು ದಿನ ಬೇಟೆಗೆ ಹೋದ ಅವಳು ಬಳಲಿ ಹಿಂತಿರುಗುತ್ತಿದ್ದಾಗ ರಾತ್ರಿಯಾಗುತ್ತಿದ್ದುದನ್ನು ಕಂಡು ಅರಣ್ಯದ ಶಿವನ ಗುಡಿಯಲ್ಲಿ ಕಲ್ಲು ನೆಲದ ಮೇಲೆ ಮಲಗಿ ನಿದ್ದೆ ಹೋದಳು. ಆ ರಾತ್ರಿ ಅವಳಿಗೆ ಕನಸು ಬಿತ್ತು. ಆ ಕನಸು ಅವಳ ನವಯೌವನೋದಯವನ್ನು ಚೆನ್ನಾಗಿ ಪ್ರತಿಬಿಂಬಿಸುತ್ತದೆ.

ಮುದ್ದಾದ ಜಿಂಕೆ ಮರಿಯನ್ನು ಗಾಯಗೊಳಿಸದೆ ಹಿಡಿಯಬೇಕೆಂದು ಚಿತ್ರಾಂಗದೆ ಕನಸಿನ ಅರಣ್ಯದಲ್ಲಿಯೆ ಓಡಿದಳು. ಎಷ್ಟು ಓಡಿದರೂ ಆ ಮರಿ ಸಿಕ್ಕದೆ ಹೋದಾಗ ಆ ಮರಿಯನ್ನು ಕೊಲ್ಲಬೇಕೆಂದು ಬಿಲ್ಲನ್ನು ಎತ್ತಿದಳು. ಆ ಮರಿಗೆ ಬದಲಾಗಿ ಸುಂದರ ಪುಷ್ಪಗಳಿಂದ ವಿರಾಜಿಸುವ ದ್ವೀಪ ಮಧ್ಯದಲ್ಲಿ ತೇಜಸ್ವಿಯಾದ ಸುಂದರ ಪುರುಷನು ಕಾಣಿಸಿದನು. ಅವನನ್ನು ನೋಡಿದೊಡನೆ ಅವಳ ಕೈಯ ಬಿಲ್ಲು ಜಾರಿತು. ತಾನು ಹೆಣ್ಣೆಂಬ ನಾಚಿಗೆ ಮೊದ

ಲನೆಯ ಬಾರಿಗೆ ಮೂಡಿತು. ಪುರುಷವೇಷದಲ್ಲಿ ವ್ಯವಹರಿಸುತ್ತಿದ್ದ ಚಿತ್ರಾಂಗದೆಗೆ ಯೌವನೋದಯದಲ್ಲಿ ಸುಪ್ತವಾಗಿದ್ದ ಹೆಣ್ಣುತನ ಪ್ರಕಟವಾಗುತ್ತಿತ್ತು ಎಂಬುದನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

“......................ಸ್ಫುರಿಸಿತಾ ಗಂಡೆದೆಯ
ಹೃದಯದಲಿ ತಾನು ಹೆಣ್ಣೆಂಬ ಲಜ್ಜೆಯ ಲಹರಿ
ಮೊತ್ತಮೊದಲ್; ಕೋಮಲತೆ ಕುಡಿವರಿದುದೊಡನೊಡನೆ
ಸೌಂದರ್ಯ ತೃಷೆಯಿಂದೆ. ಪ್ರೇಮಲತೆ ಬಾಯಾರಿ
ಕಾತರಿಸಿತಾವುದನೊ ತಾನರಿಯದುದ ಬಯಸಿ.”

—ಪು. ೭

ಮೊದಲ ಬಾರಿಗೆ ಚಿತ್ರಾಂಗದೆಯ ಸ್ಥಿತಿ ಹಾಗಾಯಿತು. ಅನೇಕ ಕನಸುಗಳು ನಮ್ಮ ಸುಪ್ತವಾದ ಬಯಕೆಗಳ ಪ್ರತಿಮೆಗಳಂತೆ ಜೀವನದಲ್ಲಿ ಬರುತ್ತವೆ. ಚಿತ್ರಾಂಗದೆಯ ಅಂತರಂಗವನ್ನು ಕಾಣಲು ಈ ಕನಸು ಒಂದು ದಿಕ್ಸೂಚಿಯಾಗಿದೆ. ಚಿತ್ರಾಂಗದೆ ಈ ಸ್ಥಿತಿಯಲ್ಲಿರುವಾಗಲೆ ಮಧು ಮದನರೂ ತೇಲಿ ಬಂದರು. ಹೀಗೆ ಪವಾಡದ ಮೇಲೆ ಪವಾಡವನ್ನು ಕಂಡು ಅವಳಿಗೆ ಎಚ್ಚರವಾಗಿ ಕನಸಿನಿಂದ ಅವಳು ಎಚ್ಚತ್ತಳು.

ಶಿವನ ಗುಡಿಯನ್ನು ಬಿಟ್ಟು ಅವಳು ಹೋದುದು ಅರಣ್ಯದ ಸರೋವರದ ಬಳಿಗೆ. ಒಮ್ಮೆಮ್ಮೆ ಕನಸು ನನಸಾಗುವಂತೆ ಸರೋವರದ ಮತ್ತೊಂದು ದಡದ ಬಂಡೆಯ ಮೇಲೆ ತೇಜಸ್ವಿಯೊಬ್ಬನ್ನು ಕುಳಿತಿರುವುದು ಕಾಣಿಸಿತು. ಅವನ ಸೌಂದರ್ಯ ಅವಳನು ಮೋಹಿಸಿ ಸೆಳೆಯಿತು.

"......................ತಾಪಸನ ತೇಜಸ್ಸು
ಮೋಹಿಸಿತ್ತೆಳೆಸಿತ್ತು ಮೋಹನಾಂಗಿಯಂ
ಮೊದಲ ನೋಟಂ ಮೊಳೆಯುವೆಳ ಎದೆಯೊಳಂ, ಕನ್ಯೆ
ಚಿತ್ರಾಂಗದೆಯಂ"

—ಪ್ರ. ೧೦

ಆಕರ್ಷಿತಳಾದ ಚಿತ್ರಾಂಗದೆ ಅರ್ಜುನನ ಬಳಿಗೆ ಸಾರಿದೊಡನೆ ಹೆಣ್ತನದ ನಾಚಿಕೆ ಅವಳಲ್ಲಿ ಸುಳಿಯಿತು. ಯತಿವೇಷದಲ್ಲಿದ್ದ ಆ ತೇಜಸ್ವಿ ಕಣ್ತೆರೆದು, ತರುಣ ವೇಷದಲ್ಲಿದ್ದ ಚಿತ್ರಾಂಗದೆಯನ್ನು ಯಾರೆಂದು ಕೇಳಿ, ಅಂಜದೆ ಹೇಳಬೇಕೆಂದು ಮಾತನಾಡಿಸಿದನು. ಸ್ತ್ರೀ ಸಹಜತೆ ಮೆಲ್ಲನೆ ಮೈದೋರುತ್ತಿದ್ದರೂ ಇದುವರೆಗೆ ಪಡೆದ ಕ್ಷಾತ್ರ ಶಿಕ್ಷಣದಿಂದಾಗಿ "ಅಂಜದಿರು" ಎಂಬ ಮಾತನ್ನು ಕೇಳಿದೊಡನೆ ಬಿಂಕದುರಿ ಅವಳ ಹೃದಯದಲ್ಲಿ ಉರಿದೆದ್ದಿತು. ಅಡವಿಯ ಸ್ತ್ರೀಯಂತೆ ಒರಟಾಗಿ ಮಾತನಾಡಿದಳು. "ನೀನಾರು?" ಎಂದು ಅರ್ಜುನನನ್ನೆ ಪ್ರಶ್ನಿಸಿದಳು. ಪುರುಷ ವೇಷದಲ್ಲಿದ್ದ ಚಿತ್ರಾಂಗದೆಯನ್ನು ತರುಣನೆಂದೇ ತಿಳಿದು ತಾನು ಅರ್ಜುನನೆಂದು ಉತ್ತರ ಹೇಳಿ ಸಿಂಹ ಗಾಂಭೀರ್ಯದಿಂದೆದ್ದು ಅಡವಿಯಲ್ಲಿ ಮರೆಯಾದನು.

ಚಿತ್ರಾಂಗದೆ ಲಜ್ಜೆ ಭಯ ವಿಸ್ಮಯಗಳಿಂದ ಕುಗ್ಗಿ ತನ್ನ ಪಾಳಯಕ್ಕೆ ಹಿಂತಿರುಗಿದಳು. ತನ್ನ ಪರಿವಾರದವರಿಗೆ ಹಿಂದಿನ ರಾತ್ರಿ ಬಾರದುದಕ್ಕೆ ನೆಪವನ್ನು ಹೇಳಿ ಹೃದಯದಲ್ಲಿ ಮೂಡಿದ್ದ ಅರ್ಜುನ ಮೂರ್ತಿಯನ್ನು ನೆನೆಯುತ್ತ "ಹೆಣ್ತನಕೆ ತಗುವಂತೆ ಮೋಹಂ ಚೆಲ್ವರಳುವಂತೆ" ತನ್ನನ್ನು ಅಲಂಕರಿಸಲು ತನ್ನ ಸಖಿಯರಿಗೆ ಹೇಳಿದಳು. ಅವಳ ಗಂಡುಡುಗೆಯೂ ವೀರಕಾರ್ಯದಿಂದ ಬಲಯುತವಾದ ತೋಳುಗಳೂ ಅವಳಿಗೆ ಜುಗುಪ್ಸೆಯನ್ನುಂಟು

ಮಾಡಿದುವು. ಅರ್ಜುನನ ಮನಸ್ಸನ್ನು ಆಕರ್ಷಿಸುವ ಹೆಣ್ಣಿನ ರೀತಿ ವಿನ್ಯಾಸಗಳೆ ಅವಳಿಗೆ ಪ್ರಿಯವಾಗಿ ಕಂಡುವು. ಸಖಿಯರು ಅವಳನ್ನು ನಾನಾ ರೀತಿಯಲ್ಲಿ ಸಿಂಗಾರಮಾಡಿದರು. ರನ್ನಗನ್ನಡಿಯಲ್ಲಿ ತನ್ನನ್ನು ನೋಡಿಕೊಂಡು ಮೆಚ್ಚಿದಳು. ಆಗಲೆ ಸಂಜೆಯಾಗಿತ್ತು. ತನ್ನನ್ನು ಯಾರೂ ಹಿಂಬಾಲಿಸಬಾರದೆಂಬ ಕಟ್ಟಾಣತಿಯನ್ನಿತ್ತು ಸೂರ್ಯನು ಅಸ್ತಮಿಸುತ್ತಿರಲು ಶಿವನ ಗುಡಿಯನ್ನು ಸೇರಿದಳು. ಅತ್ತಲಿತ್ತ ಅರ್ಜುನನಿಗಾಗಿ ಹುಡುಕಿ ಕೊನೆಗೆ ಅಗ್ನಿಕುಂಡದ ಎದುರು ಕುಳಿತಿದ್ದ ಯತಿವೇಷದ ಅರ್ಜುನನನ್ನು ಕಂಡಳು. ಒರಟೊರಟಾಗಿ ಮಾತನಾಡಿ ಅವನನ್ನು ಆಕರ್ಷಿಸುವೆನೆಂದು ತಿಳಿದಳು, ರತಿಕಲಾಭ್ಯಾಸದಲ್ಲಿ ಅಶಿಕ್ಷಿತಳಾದ ಚಿತ್ರಾಂಗದೆ !

"ವರನೆಡೆಗೆ ವೈಯಾರದಿಂದೈದೆಸಂಗನೆಯ
ಪಾಂಗಿನಿಂದಲ್ತು, ವಿದ್ವೇಷಿಯಂ ಸಂಹರಿಸಿ
ವಿಜಯ ದೃಢ ನಿಶ್ಚಯದಿ ಬಿಂಕದಿಂ ಮುಂಬರಿವ
ಕಲಿಯ ವಿಕ್ರಮ ಗಮನ ವಿನ್ಯಾಸಮಂ ಮರೆದು.
ಪುರುಷನೊಲ್ಮೆಯನಾಕೆ ವೈರಿಯಂ ಗೆಲುವಂತೆ
ಬಲದಿನಾಕ್ರಮಿಸಿ ಗೆಲೆ ಭಾವಿಸಿದಳಜ್ಞಾನದಿ." —ಪು. ೨೩

ಅವಳ ರೀತಿಯನ್ನು ಕವಿ ಹೀಗೆ ಚಿತ್ರಿಸಿ ಅವಳ ಆಗಿನ ಸ್ವಭಾವವನ್ನು ಚಿತ್ರಿಸಿದ್ದಾರೆ. ಆ ರಾತ್ರಿ ಆ ಭಯಂಕರ ಕಾಡಿನಲ್ಲಿ ಬರುತ್ತಿದ್ದ ಸ್ತ್ರೀ ವೇಷವನ್ನು ಕಂಡು ಅರ್ಜುನನಿಗೆ ಆಶ್ಚರ್ಯ. ಸ್ವಲ್ಪವೂ ಭಯವಿಲ್ಲದೆ ಬಂದ ಹೆಣ್ಣನ್ನು ಕಂಡು ಮಾನವ ಸ್ತ್ರೀಯರು ಹೀಗೆ ಬರುವುದು ಸೋಜಿಗವೆಂದು ಹೇಳಿ, ಸದ್ವಂಶಜರಿಗೆ ಅಂಥ ವೃತ್ತಿಸಲ್ಲದೆಂದು ಹೇಳಿದನು. ಅಂದು ಪ್ರಾತಃಕಾಲ ಸರೋವರದ ಬಳಿಬಂದ ತನ್ನ ಅಣ್ಣನಿಂದ ಅರ್ಜುನನು ಬಂದಿ

ರುವನೆಂಬುದನ್ನು ತಿಳಿದು ಅಪರಿಚಿತೆಯಾದರೂ ಪ್ರಣಯ ಭಿಕ್ಷೆಗಾಗಿ ಬಂದಿರುವುದಾಗಿ ಹೇಳಿದಳು ಚಿತ್ರಾಂಗದೆ. ಸತ್ಯವನ್ನು ಮರೆಮಾಡಿ ಈ ರೀತಿ ಅವಳು ಹೇಳಿದುದು ಕಾರ್ಯ ಸಾಧನೆಗಾಗಿ. ಸ್ತ್ರೀರೂಪದಲ್ಲಿದ್ದ ಅವಳ ಪುರುಷಭಂಗಿಯನ್ನು ಕಂಡು, ಸಾಹಸಿ, ಕಿರಾತಕನ್ಯೆ, ಎಂದು ಹೇಳುತ್ತ ತನ್ನ ಬ್ರಹ್ಮಚರ್ಯ ವ್ರತವನ್ನೊಡ್ಡಿ ಅವಳನ್ನು ತಿರಸ್ಕರಿಸಿದನು. ಅವಳಿಗೆ ಕೋಪ ದುರಿ ಮತ್ತೆ ಹೆಡೆಯೆತ್ತಿತ್ತು. ಆದರೆ ಕಂಬನಿಗರೆದು ಸೋತರೂ ಸ್ತ್ರೀಸಹಜವಾದ ಪ್ರಥಮ ಸಂಯಮವನ್ನು ಪಡೆಯುವುದರಲ್ಲಿ ಅವಳು ವಿಜಯವನ್ನು ಗಳಿಸಿದಳು. ಪ್ರಣಯ ಭಂಗದಿಂದ, ಕಟು ತಿರಸ್ಕಾರದಿಂದ, ಶೋಕಭಾರದಿಂದ ಕುಗ್ಗಿದ ಅವಳು ತನ್ನ ಸಹಜ ಸ್ವಭಾವವನ್ನು ಬೇಗನೆ ಅರಿತುಕೊಂಡಳು.

ಅರ್ಜುನನಿಂದ ತಿರಸ್ಕೃತಳಾಗಿ ಮನ್ಮಥನ ಜ್ವಾಲೆಗೆ ಸಿಲುಕಿದ ಚಿತ್ರಾಂಗದೆ ಶಿವನ ಗುಡಿಯನ್ನು ಸೇರಿದಳು. ಅವಳ ಹೃದಯದಲ್ಲಿ ಶೂನ್ಯತೆ ತುಂಬಿತ್ತು; ಬೆಳುದಿಂಗಳು ತುಂಬಿ ರಾರಾಜಿಸುತ್ತಿದ್ದರೂ ಜಗತ್ತು ನೀರಸವಾಗಿ ಕಂಡಿತು. ಪುರುಷನನ್ನು ಆಕರ್ಷಿಸುವ ಲತಾಂಗಿಯರ ಲಾವಣ್ಯದ ಮುಂದೆ ಅವಳ ಅರಸುಗುವರಿತನ, ಕಲಿತ ಬಿಲ್ಲಿನ ವಿದ್ಯೆ, ರಣಕೀರ್ತಿ ಎಲ್ಲವೂ ತೃಣವಾಗಿ ಕಂಡಿತು. ತನ್ನ ಮೈಯನ್ನು ಅಲಂಕರಿಸಿದ ಒಡವೆಗಳನ್ನು ತೆಗೆದೆಸೆದು ಮನ್ಮಥ ಕೃಪೆಗಾಗಿ ಬೇಡುತ್ತ ದೇವಾಲಯದ ಜಗಲಿಯ ಮೇಲೆ ಉತ್ಕಂಠೆಯಾಗಿ ಮಲಗಿದಳು.

ಆ ರಾತ್ರಿ ಸ್ವಪ್ನದರ್ಶನದಲ್ಲಿ ಚಿತ್ರಾಂಗದೆ ಮದನನನು ಕಂಡಳು. ಒಂದು ದಿನದಲ್ಲಿಯೆ ಯುಗದ ತಪವನ್ನಾಚರಿಸಿ ಬೆಂದು ನೊಂದು ತನ್ನ ಹೃದಯದ ನೋವನ್ನು ಮದನನಲ್ಲಿ

ಅರಿಕೆಮಾಡಿಕೊಂಡಳು. ಒಂದು ದಿನವಾದರೂ "ವಿರಾಗಿಯಜ಼ರ್ಜು ನನೆದೆಯ ಕೋಂಟೆಯಂ ಹುಡಿಗೈವ ಶೃಂಗಾರವೈತರಲಿ" ಎಂದು ಬೇಡಿಕೊಂಡಳು. ಸುಪ್ರೀತನಾದ ಮದನನು "ದಿನವೊಂತ ಕೊಂದು ಮಾಸಂಬರಂ ಚೆಲುವಿನ ಬಸಂತ ಬನದ ಲರುಗಳ ಮೆಯ್ಯ ಸಿರಿ ನಿನ್ನೊಡಲಸಾವರಿಸಿ ತೀವಿ ನೆರೆ ತುಂಬಿರಲಿ" ಎಂದು ವರವನ್ನಿತ್ತನು. ಅರ್ಜುನನನ್ನು ಪಡೆಯಬೇಕೆಂಬ ಚಿತ್ರಾಂಗದೆಯ ಉತ್ಕಂಠತೆಯೆ ಮದನನ ರೂಪದಲ್ಲಿ ವರವನ್ನಿತ್ತಿತೆಂದು ಕವಿ ಪ್ರತಿಮಾವಿಧಾನದಲ್ಲಿ ಚಿತ್ರಿಸಿದ್ದಾರೆ. ಮೋಹಪರವಶನಾದ ಹೆಣ್ಣಿನ ಅಂತರಂಗಸ್ಥಿತಿ ಇಲ್ಲಿ ಚೆನ್ನಾಗಿ ತಿಳಿಯುವಂತಾಗಿದೆ.

ಮೊದಲ ಪ್ರಯತ್ನಗಳಿಂದ ವಿಫಲಳಾಗಿ ಪ್ರಣಯ ಪ್ರಪಂಚದಲ್ಲಿ ಅನುಭವವನ್ನು ಪಡೆದ ಚಿತ್ರಾಂಗದೆ ಮದನನ ವರದಿಂದ ಪ್ರಸನ್ನಳಾಗಿ ಆಭರಣಗಳ ನೆರವಿಲ್ಲದೆ ಮದನನ ವರದಿಂದ ಸಹಜ ಸೌಂದರ್ಯದಿಂದ ಶೋಭಿಸುವಂತಾದಳು. ಪ್ರಾತಃಕಾಲದಲ್ಲಿಯೆ ಎದ್ದು ಸರೋವರದ ನೀರಿನಲ್ಲಿ ಕಾಣುತ್ತಿದ್ದ ತನ್ನ ಪ್ರತಿಬಿಂಬದಲ್ಲಿ ತನ್ನ ಅಂಗಾಂಗಗಳ ಸೌಂದರ್ಯವನ್ನು ನೋಡಿಕೊಂಡಳು. ಸಮಸ್ತ ಪ್ರಕೃತಿಯೂ ಹೊಸ ಸೌಂದರ್ಯದಿಂದ ಶೋಭಿಸುತ್ತಿತ್ತು. ಅರ್ಜುನನಿಗೆ ಆ ಸುಂದರವಾದ ಬೆಳಗು ಜನ್ಮಾಂತರದ ಭೋಗವನ್ನು ಕೆರಳಿಸುತ್ತಿತ್ತು. ಅದೇ ಸಮಯಕ್ಕೆ ಸರಿಯಾಗಿ ಸರೋವರದ ದಡದಲ್ಲಿ ಸೌಂದರ್ಯರಾಶಿಯಾದ ಚಿತ್ರಾಂಗದೆಯನ್ನು ಕಂಡು ಅವನ ಸಂಯಮದ ಕಟ್ಟು ಒಡೆದುಹೋಯಿತು. ಕಂಡರೂ ಕಾಣದವಳಂತೆ ಅರ್ಜುನನ ಕಡೆಗೆ ತನ್ನ ಮಿಂಚುನೋಟವನ್ನು ಬೀರಿ ಮರಗಳ ಮರೆಯಲ್ಲಿ ಮರೆಯಾದಳು ಚಿತ್ರಾಂಗದೆ! ಸ್ತ್ರೀಸಹಜವಾದ ಸಂಯಮದಿಂದ ವರ್ತಿಸಿ ಅರ್ಜುನನ ಹೃದಯ

ವನ್ನು ಸೂರೆಗೈದಳು. ಸುಂದರಿಯಾಗಿ ಕಾಣಿಸಿಕೊಂಡು ಅವನನ್ನು ತನ್ನ ಬಳಿಗೇ ಬರುವಂತೆ ಮಾಡುವ ಹೊಸ ಪ್ರಯೋಗವನ್ನು ನಡೆಸಿದಳು. ಮೋಹಪರವಶನಾದ ಅರ್ಜುನನು ಅವಳನ್ನು ಅರಸುತ್ತ ಶಿವನ ಗುಡಿಯ ಬಳಿ ಹೂ ಕೊಯ್ಯುತ್ತಿದ್ದ ಅವಳ ಬಳಿಗೆ ಹೋದನು. ಚಿತ್ರಾಂಗದೆ, ಮುಖದಲ್ಲಿ ನಾಚಿಕೆಯು ಕೆಂಪೇರುತ್ತಿರಲು ಮೃದುಭಾಷಿಣಿಯಾಗಿ

"ಯತಿಪತಿಯೆ, ಬಿಜಯಂಗೈ; ಸನ್ಮಾನ್ಯನೆನಗೆ ನೀಂ
ಮೇಣತಿಥಿ. ದೇಗುಲವಿದೆನ್ನ ಮನ, ಆಶ್ರಮಂ.
ನಾಂ ತಪಸ್ವಿನಿಯಿಲ್ಲಿ. ನಿನಗೆ ಸುಸ್ವಾಗತಂ!"

—ಪು. ೩೫

ಎಂದು ಮಾತಿನ ವೈಯಾರದಿಂದ ಆದರಿಸಿದಳು. ಹಿಂದೆ ಚಿತ್ರಾಂಗದೆ ತನ್ನ ಗಂಡುಡುಗೆಗೆ ತಾನೆ ನಾಚಿದಂತೆ ಅರ್ಜುನನು ತನ್ನ ಯತಿವೇಷಕ್ಕೆ ತಾನೆ ಜುಗುಪ್ಸೆಪಟ್ಟನು. ತಾನು ಕ್ಷತ್ರಿಯ ವೀರನೆಂದೂ ಪ್ರತಿಜ್ಞೆಯುವುದಿಂದ ಯತಿವೇಷದಲ್ಲಿರುವುದಾಗಿಯೂ ಹೇಳಿ ಅವಳು ಏತಕ್ಕಾಗಿ ತಪಸ್ವಿನಿ ಎಂದು ಪ್ರಶ್ನಿಸಿದನು. ಅರ್ಜುನನ ಕುತೂಹಲವನ್ನು ಕೆರಳಿಸಿ ತನ್ನ ಆದರ್ಶಪ್ರಿಯಮೂರ್ತಿ ಜಗದ್ವಿಜಯಿ ಅರ್ಜುನನೆಂದು ಹೇಳಿದಳು. ಆಗ ಅರ್ಜುನನು ಅವಳಿಗೆ ಶರಣಾಗಿ ಬೇಡುತ್ತಾನೆ ಪ್ರಣಯಭಿಕ್ಷೆಯನ್ನು. ಚಿತ್ರಾಂಗದೆ ಅರ್ಜುನನ ಸ್ಥಿತಿಯನ್ನು ಕಂಡು ಆಂತರಿಕವಾಗಿ ಸಂತೋಷವನ್ನು ಅನುಭವಿಸುತ್ತ ಬಾಹ್ಯದಲ್ಲಿ ಅವನಿಗೆ ವಿವೇಕ ಹೇಳಿದಳು.

"..................ಪತಿತನಾಗದಿರು ಯತಿ!
.......................................
............ಕ್ಷಣಿಕ ಸುಖ ಸಂಪ್ರಾಪ್ತಿಗೋಸುಗಂ
ಶಾಶ್ವತದ ಬಲಿಯೇ? ಏನಿದೀ ದುರ್ಬಲತೆ?
ಅರ್ಜುನನೇನ್, ನಿನ್ನೆ ನಿನ್ನ [illegible]."

—ಪು. ೩೯-೪೦

ಈ ಮಾತುಗಳನ್ನು ಕೇಳಿದ ಅರ್ಜುನನಿಗೆ ವೈರಾಗ್ಯ ಹೆಚ್ಚಾಗ ಲಿಲ್ಲ. ಅದಕ್ಕೆ ಬದಲಾಗಿ ಅವಳಿಗೆ ಸಂಪೂರ್ಣವಾಗಿ ಶರಣಾದನು. "ನನ್ನ ಜೀವನ ಪರಮಪುರುಷಾರ್ಥ ರೂಪಿಣಿಯೆ,ನೀನೇ ಶಾಶ್ವತ ಸತ್ಯ ಪ್ರಾಣೇಶ್ವರಿ" ಎಂದು ಪರಿಪರಿಯಾಗಿ ಬೇಡುತ್ತ ಅವಳ ಪ್ರಣಯ ಭಿಕ್ಷೆಗಾಗಿ ಪ್ರಾರ್ಥಿಸಿದನು. ಅವನ ತೃಷಾಪೂರ್ಣ ದೃಷ್ಟಿ ಅವಳ ಸರ್ವಸ್ವವನ್ನೂ ಬಿಗಿಯಿತು. ಅರ್ಜುನನು ಸಂಪೂರ್ಣವಾಗಿ ಶರಣಾದುದನ್ನು ಕಂಡು ಚಿತ್ರಾಂಗದೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿದಳು.

"..............ಪ್ರೇಮನಿಧಿ,
ಪ್ರಾಣೇಶ ಸೂರೆಗೊಳ್ಳೆನ್ನ ಸರ್ವಸ್ವಮಂ,
ಮೋಹೆನ್ನನಿಲ್ಲಗೈ!"

—ಪುಟ ೪೧

ಎಂದು ಹೇಳುತ್ತ ತನ್ನ ತೋಳುಗಳನ್ನು ನೀಡಿದಳು. ಪ್ರೇಮ ದಾಲಿಂಗನದಿಂದ ಇಬ್ಬರೂ ಮೈಮರೆತರು. ಸ್ತ್ರೀಸಹಜವಾದ ಪ್ರಥಮ ಸಂಯಮದ ಕಟ್ಟು ಸಡಿಲಿದಾಗ ಯಾವ ಸ್ಥಿತಿ ಬರು ತ್ತದೆ ಎಂಬುದನ್ನು ತಿಳಿಯಲು ಈ ಸನ್ನಿವೇಶ ಒಂದು ನಿದರ್ಶನ. ತಂದೆತಾಯಿಗಳನ್ನೂ ಮುಂದೆ ಬರಬಹುದಾದ ಅಪಖ್ಯಾತಿ ಯನ್ನೂ ಆಕೆ ಆ ಮೋಹಪರವಾದ ಸಮಯದಲ್ಲಿ ಯೋಚಿಸಲಿಲ್ಲ. ಮನ್ಮಥನ ಮಥನ ಕೋಲಾಹಲ ಹೆಚ್ಚಾಗಿರುವ ಯೌವನದಲ್ಲಿ ರತಿಯಾಸಕ್ತಿ ಕೆರಳಿದರೆ ಮಾನವ ಮನಸ್ಸು ಹುಚ್ಚಾಗುತ್ತದೆ. ಈ ಸನ್ನಿವೇಶವನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಪ್ರಿಯ ಪ್ರಿಯೆಯರು ಮಧುಮಯಸುಖದಲ್ಲಿ ರತಿಯೊಡಗಿದರು. ಚಿತ್ರಾಂಗದೆಗೆ ಪ್ರಕೃತಿ ಸೌಂದರ್ಯವನ್ನು ಕಂಡು ಸಂತೋಷ

ಗೊಳ್ಳುವ ರಸಹೃದಯವಿತ್ತು. ಒಮ್ಮೆ ಕಾಡಿನ ಸೌಂದರ್ಯ ವನ್ನು ಅರ್ಜುನನಿಗೆ ತೋರಿಸಿದಳು.

"..............ನೋಡಿದೊ ಮಧುವಿಪಿನವೆಂತು
ಮುಳುಗಿದೆ ಹಗಲ್ಗನಸಿನಲಿ! ತಣ್ಣನೆಯ ಗಾಳಿ
ತೀಡುತಿಹುದೆಂತು ಜಿಜ್ಞಣವಿಕ್ಕಿ? ನೋಡಲ್ಲಿ
ಬಿಸಿಲ ಹನಿ ಹಸುರಿನಲಿ ತಂಪನೆರಚುತ ಕಣ್ಗೆ
ಕುಣಿಯುತಿಹುದೆಂತು ! ಆ ಮರದ ಕೊಂಬೆಯ ಮೇಲೆ
ನವಿಲು ಕುಳಿತಿದೆ ಚಿತ್ರ ಬರೆದಂತೆ! ಆ ಹರಿಣಿ
ತನ್ನ ಮರಿಯೊಡನೆಂತು ಸರಸವಾಡುತಿದೆ? ಅದೊ,
ಬನದ ಮೌನದ ತೂರ್ಯವನೆ ಊದುವಂದದಲಿ
ವನವನಪ್ರತಿಧ್ವನಿತ ಕಳಕಂಠವಾಣಿ! ಆಃ
ಗಿರಿಯಿಂದೆ ಗಿರಿಗೆಂತು ಟಿನುಕಣಿತವಾಗುತ್ತಿದೆ ಕೇಳ್!"

—ಪುಟ ೪೩

ಚಿತ್ರಾಂಗದೆಗೆ ಪ್ರಕೃತಿ ಸೌಂದರ್ಯವನ್ನು ರಸಾಸ್ವಾದನೆ ಮಾಡುವ ಶಕ್ತಿ ಮಿನೆನಾಗಿತ್ತೆಂಬುದಕ್ಕೆ ಈ ನಿದರ್ಶನ ಸಾಕ್ಷಿ. ಅರ್ಜುನನು ಪಾಂಡವರ ಕಥೆಯನ್ನು ಹೇಳಿ ಅವಳನ್ನು ಸಂತೋಷ ಗೊಳಿಸಿದನು. ಅವನಿಗೆ ಅವಳ ಹೆಸರು ಅವಳ ತಂದೆ, ತಾಯಿ, ಬಂಧುಗಳು—ಈ ವಿಚಾರಗಳನ್ನು ತಿಳಿಯುವ ಆಸೆ. ಅವನೆಷ್ಟು ಪ್ರಯತ್ನಿಸಿದರೂ ಚಿತ್ರಾಂಗದೆ ಈ ವಿಚಾರಗಳನ್ನು ಗೋಪ್ಯವಾಗಿ ಟ್ಟಳು. ಆದಕ್ಕೆ ಸರಿಯಾದ ಕಾರಣ ತಿಳಿಯುವುದಿಲ್ಲ. ತನ್ನ ಮನೆ ತನಕ್ಕೆ ಕಳಂಕಬಾರದಿರಲೆಂದೊ ಲಜ್ಜೆಯಿಂದಲೊ ಈ ವಿಚಾರವ ನ್ನಂತೂ ರಹಸ್ಯವಾಗಿಟ್ಟಳು. ಇದು ಅವಳ ಜೀವನದ ಒಂದು ದೌರ್ಬಲ್ಯವೆಂದು ಕಾಣುತ್ತದೆ. ಈ ದೌರ್ಬಲ್ಯವೆ ಮುಂದೆ ಅವಳ ವಿಪತ್ತಿಗೂ ಕಾರಣವಾಯಿತು.

ಒಂದು ದಿನ ಪ್ರಣಯಿಗಳಿಬ್ಬರೂ ಕಾಡಿನ ಗಿರಿಯನ್ನು ಹತ್ತಿ ದೂರ ಬಹುದೂರ ಹಬ್ಬಿದ ಗಿರಿವನ ಶ್ರೇಣಿಯನ್ನು ಕಂಡು ಆನಂದಪಡುತ್ತಿದ್ದರು. ಅರ್ಜುನನಿಗೆ ಅಣ್ಣಂದಿರ ನೆನಪಾಗಿ ತನ್ನ ಯಾತ್ರೆಯನ್ನು ಮುಂದುವರಿಸುವ ಆಸೆ ತುಡುಕಿತು. ಚಿತ್ರಾಂಗದೆಗೆ, "ನಿನ್ನ ತಂದೆ ತಾಯಿ ಬಂಧುಬಳಗದವರು ನಿನ್ನನ್ನು ನೋಡಲು ಬಯಸುವುದಿಲ್ಲವೆ? ನಿನ್ನ ಹೆಸರನ್ನಾದರೂ ಹೇಳಬಾರದೆ?" ಎಂದು ಕೇಳಿದನು ಅರ್ಜುನ. "ಮನೆ ನನಗಿಲ್ಲ, ಹೆಸರಿಲ್ಲ. ನಾನೊಂದು ಕನಸು" ಎಂದು ಉತ್ತರ ಹೇಳಿದಳು ಚಿತ್ರಾಂಗದೆ. ಅವಳ ಹೃದಯ ಒಂದು ಕಡೆ ತಾಯಿತಂದೆಗಳಿಗೆ ತಿಳಿಯದಂತೆ ಅರ್ಜುನನನ್ನು ಒಲಿದ ಭೀತಿಯೊಡನೆ ಅರ್ಜುನ ನನ್ನು ಬಿಡಲಾರದ ಮೋಹವೂ ಸೇರಿ ಅವಳೊಂದು ರೀತಿಯ ವಿಚಿತ್ರ ಮನೋವೇದನೆಯಲ್ಲಿ ಸಿಕ್ಕಿ ಅಮಂಗಲದ ಭೀತಿಯಿಂದ ಈ ರೀತಿ ಮಾತನಾಡಿದಳೆಂದು ಕಾಣುತ್ತದೆ. ಮದನನು ಅನು ಗ್ರಹಿಸಿದ ಒಂದು ತಿಂಗಳ ಅವಧಿಯೂ ಅಂದೇ ಮುಗಿದಿತ್ತು. ಇದ್ದಕ್ಕಿದ್ದಂತೆ ಬಿರುಗಾಳಿ ಬೀಸಿ ಸಿಡಿಲು ಮಿಂಚುಗಳು ಗಿರಿವನ ಗಳನ್ನು ನಡುಗಿಸಲಾರಂಭಿಸಿದವು. ಅರ್ಜುನ ಚಿತ್ರಾಂಗದೆಯರು ಬೇಗ ಬೇಗನೆ ಶಿವನ ಗುಡಿಯನ್ನು ಸೇರಿದರು ಆಶ್ರಯಕ್ಕಾಗಿ. ಆ ಶಿವನ ಗುಡಿಯೆ ಅವರ ಕಡೆಯ ಪ್ರಣಯ ಸದನವಾಯಿತು. ದುಃಖಿಸುತ್ತಿದ್ದ ಚಿತ್ರಾಂಗದೆಗೆ ತೀರ್ಥಯಾತ್ರೆಯನ್ನು ಮುಗಿಸಿ ಆರುತಿಂಗಳಲ್ಲಿ ಬರುವೆನೆಂದು ಹೇಳಿ ಆಕೆಯನ್ನು ಕಷ್ಟದಿಂದ ಸಂತೈಸಿದನು ಅರ್ಜುನ.

"..............ಪವಡಿಸಿದರಿರ್ವರುಂ
ಮೊಗಕೆ ಮೊಗಮೊರ್ದೆಗೆ ಎರ್ದೆಯಿಟ್ಟು ಆಲಿಂಗನದ
ಸುಖಲಹರಿಯಲಿ ತೇಲಿ"

—ಪುಟ ೪೯

ಅವರಿಗೆ ತಾವಿರುವುದು ಶಿವನ ಗುಡಿಯೆಂಬುದೂ ಮರೆತು ಹೋಯಿತು. ಮದೋನ್ಮತ್ತ ಅವಸ್ಥೆಯಲ್ಲಿ ವಿವೇಕದ ಕಣ್ಣು ಕುರುಡಾಗುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ.

ರಾತ್ರಿ ಕಳೆಯಿತು. ಬೆಳಗಾದ ಮೇಲೆ ಚಿತ್ರಾಂಗದೆಯ ಬಳಿ ಅರ್ಜುನನಿರಲಿಲ್ಲ. ಅಪಾರವಾದ ದುಃಖದಿಂದ ಎಲ್ಲಿಡೆಯೂ ಅವನನ್ನು ಕೂಗಿ ಕರೆಯುತ್ತ ಕಾಡಿನಲ್ಲಿ ಹುಡುಕಿದಳು. ಅವಳ ದೃಷ್ಟಿ ಕೈಯಲ್ಲಿದ್ದ ಉಂಗುರದ ಕಡೆಗೆ ಬಿದ್ದು ಹಿಂದಿನ ರಾತ್ರಿ ಆರುತಿಂಗಳಲ್ಲಿ ಬರುವೆನೆಂಬ ರಮಣನ ಮಾತನ್ನು ನೆನೆದು ಉಂಗುರವನ್ನು ಗುಟ್ಟಾಗಿ ಬೈಚಿಟ್ಟು ಗರ್ಭಿತ ರಹಸ್ಯೆಯಾಗಿ ತನ್ನ ಶಿಬಿರವನ್ನು ಸೇರಿದಳು. ಇವಳ ಕಟ್ಟಾಣತಿಯಿಂದಲೋ ಏನೊ ಒಂದು ತಿಂಗಳು ಅವಳನ್ನು ಯಾರೂ ಹುಡುಕ-ವುದಿಲ್ಲ. ದಿಗ್ವಿಜಯಕ್ಕೆ ಹೊರಟಿದ್ದ ಸೈನ್ಯ ಮಣಿಪುರಕ್ಕೆ ಹಿಂತಿರುಗಿತು.

ಯೌವನದ ಉಕ್ಕಿನಲ್ಲಿ ರಹಸ್ಯವಾಗಿ ಅರಣ್ಯದಲ್ಲಿ ಅರ್ಜುನನನ್ನು ಕೂಡಿದುದೇನೊ ಆಯಿತು. ಅದರ ಸವಿಯನ್ನೂ ನೋವನ್ನೂ ಅನುಭವಿಸಿದುದಾಯಿತು. ಅವಳು ಅರಮನೆಯನ್ನು ಸೇರಿದ ಮೇಲೆ ಪ್ರಾರಂಭವಾಗುತ್ತದೆ ಅವಳ ಕಷ್ಟದ ಪರೀಕ್ಷೆ! ಯಾವುದೊ ನೋವು ಅವಳ ಹೃದಯವನ್ನು ಕೊರಗಿಸತೊಡಗಿತು. ಅವಳು ಅಂತರ್ಮುಖಿಯಾದಳು.

"..............................ಸಖೀ
ಜನರೊಡನೆ ಬೆರೆಯಲೊಲ್ಲಳು. ಮಾತುಕತೆಗಳಲಿ
ದಿನದಂಗಳಲಿ ನಲಿಯಲೊಲ್ಲಳು; ಮರೆತು ಮೈಮ್ಯಂ
ಧ್ಯಾನಿಸುವಳನುದಿನಂ ನಿಂತಲ್ಲಿ ಕುಳಿತಲ್ಲಿ"

—ಪುಟ ೫೮–೫೯

ಅವಳಿಗೆ ಕವಿದ ಮಂಕನ್ನು ಕಂಡು ಅದಕ್ಕೆ ಮದುವೆಯೆ ಸಿದ್ಧೌಷಧವೆಂದು ತಿಳಿದು ತಾಯಿತಂದೆಗಳು ಅದಕ್ಕೆ ಸಿದ್ಧಮಾಡಿದರು. ತಾಯಿಗೂ ಯಥಾರ್ಥವನ್ನು ತಿಳಿಸುವುದು ಅವಳಿಗೆ ಕಷ್ಟವಾಯಿತು. ನಡುಗುತ್ತ ಗದ್ಗದ ಕಂಠೆಯಾಗಿ ನಿರ್ಜನಾರಣ್ಯದಲ್ಲಿ ಗಾಂಧರ್ವವಿಧಿಯಿಂದ ಮದುವೆಯಾದುದಾಗಿ ಹೇಳಿದಳು. ಈ ಮಾತುಗಳನ್ನು ಹೇಳಬೇಕಾದರೆ ಮರುಜನ್ಮವೆತ್ತಿದಷ್ಟು ಕಷ್ಟವಾಯಿತು ಅವಳಿಗೆ. ತಾಯಿಯಿಂದಲಾದರೂ ಸಹಾನುಭೂತಿ ದೊರಕಬಹುದೆಂದು ಆಸೆಯಿಂದಿದ್ದಳು. ಆದರೆ ತಾಯಿ ಕುಲದ ಕೀರ್ತಿಗೆ ಅಪಯಶಸ್ಸನ್ನು ತಂದುದಕ್ಕಾಗಿ ಪರಿತಪಿಸಿದಳು. ಚಿತ್ರಾಂಗದೆ ಇನ್ನೂ ಆರುತಿಂಗಳಲ್ಲಿ ಲೋಕವಿಖ್ಯಾತನಾದ ತನ್ನ ಪತಿಯನ್ನು ಕರೆತರುವುದಾಗಿ ತಾಯಿಗೆ ಸಮಾಧಾನ ಹೇಳಿದಳು. ತನ್ನ ರಮಣನ ಹೆಸರನ್ನು ತಾಯಿಗೂ ಹೇಳುವುದಿಲ್ಲ. ಅವಳು ಇನ್ನೂ ಗರ್ಭಿತ ರಹಸ್ಯೆ.

ಆರು ತಿಂಗಳು ಮುಗಿದೊಡನೆ ಸಖಿಯರೊಡನೆ ಕಾಡಿನ ಶಿವನ ಗುಡಿಯನ್ನು ಸೇರಿ ಅರ್ಜುನನಿಗಾಗಿ ಕಾದಳು, ಗುಡಿಯ ಸಮೀಪದ ಅರಣ್ಯದಲ್ಲಿ ಹುಡುಕಿದಳು. ಎಲ್ಲಿಯೂ ಪಾರ್ಥನ ಸುಳಿವೇ ಕಾಣಿಸಲಿಲ್ಲ. ತಾಯಿಗೆ ಕೊಟ್ಟ ವಚನವನ್ನು ನೆನೆದು ಮನದಲ್ಲಿ ಕೊರಗಿದಳು. ಆಶೆ ನಿರಾಶೆಗಳ ತೂಗುಯ್ಯಾಲೆಯಲ್ಲಿ ಅವಳು ಹತ್ತು ದಿನಗಳವರೆಗೆ ಕಾದುನೋಡಿದಳು. ಪಾರ್ಥನು ಬರಲಿಲ್ಲ.

"ನಿಂತ ತುದಿವೆರಳಿನೊಳೆನಲ್ಕೆ ಕಾಯ್ದಾ ಬಸುರಿ
ಶೋಕದುಃಖ ದ್ವಂದ್ವದಲಿ ಬೆಂದು ಮಣಿಪುರಕೆ
ಹಿಂತಿರುಗಿ ಬಂದಳತಿಭೀಷಣ ಮನಸ್ಥಿತಿಯಲಿ!"

—ಪುಟ ೬೪

ಅವಳ ನಿರೀಕ್ಷೆ ಫಲಿಸದೆ, ಅವಳ ಮನಸ್ಸನ್ನು ಅಪಾರ ದುಃಖ ಕವಿಯಿತು. ಅರಮನೆಗೆ ಹಿಂತಿರುಗಿದ ಮೇಲೆ ಅವಳಿಗೆ ಇನ್ನು ಬದುಕಿದ್ದರೂ ಸತ್ತಂತೆ ಎಂಬ ದಾರುಣ ವ್ಯಥೆಯಾಯಿತು. ಒಂದು ದಿನ ರಾತ್ರಿ ಮಣಿಪುರಕ್ಕೆ ಸಮೀಪವಾಗಿದ್ದ ಸಮುದ್ರಕೆ ಹೊರಟಳು. ಆತ್ಮಹತ್ಯೆ ಮಾಡಿಕೊಳ್ಳಲೆಂದು. ಸಮುದ್ರತೀರವನ್ನು ಸೇರಿ ತನ್ನನ್ನು ಅರ್ಪಿಸಿಕೊಳ್ಳಲು ನೀರಿಗೆ ಇಳಿದೊಡನೆ ಸಮುದ್ರದ ಅಲೆಗಳು ಅವಳನ್ನು ತೀರಕ್ಕೆ ಎಸೆದುಬಿಟ್ಟುವು. ಆ ಸ್ಥಿತಿಯಲ್ಲಿ ಸಮುದ್ರದ ಮೂರುತಿ ಮಾತೃಧರ್ಮವನ್ನು ಬೋಧಿಸಿ ತಪಸ್ವಿನಿಯಾಗಿರಲು ಆದೇಶ ನೀಡಿತು. ಆ ಆದೇಶದಲ್ಲಿ ನಂಬಿಕೆಯಾಯಿತು ಅವಳಿಗೆ.

"ತಾಯಾಗಿ ಪೆತ್ತು ಪೊರೆದಳ್ ತನ್ನ ಸುಪವಿತ್ರ
ಧಾರನುಂ, ಪೂಜ್ಯ ಮನದಿಂ, ಪೂಜೆಯಿಂದರಿತು."

—ಪ್ರಬ ೬೮

ಒಂಬತ್ತು ತಿಂಗಳು ಕಳೆದ ಮೇಲೆ ಚಂದ್ರಸಮ ತೇಜಸಿ ಪುತ್ರನು ಜನಿಸಿದನು. ಸಿಂಹಿಣಿ ತನ್ನ ಕಿಶೋರ ಶಿಶುವನ್ನು ಬೆಳೆಸುವಂತೆ ವೀರಮಾತೆಯಾಗಿ ಮಗನನ್ನು ಪೋಷಿಸಿದಳು. ಮಗನು ಬೆಳೆದು ಬಭ್ರುವಾಹನನೆಂಬ ಹೆಸರಿನಿಂದ ಮಹಾವೀರನಾದನು. ಚಿತ್ರವಾಹನನು ಅಳಿಯಲು ಚಿತ್ರಾಂಗದೆಯೆ ರಾಜ್ಯಸೂತ್ರಗಳನ್ನು ಹಿಡಿದು ರಾಜ್ಯವಾಳಿದಳು. ಮಗನು ಪ್ರಾಪ್ತ ವಯಸ್ಸಿಗೆ ಬಂದೊಡನೆ ರಾಜ್ಯವನ್ನು ಅವನಿಗೆ ಒಪ್ಪಿಸಿ ತಾನು ರಾಜಧಾನಿಯ ಹೊರವಳಯದ ಪರ್ಣಕುಟಿಯಲ್ಲಿ ತಪಸ್ವಿನಿಯಾಗಿ ನಿಂತಳು. ಆದರೆ ಮಗನಿಗೆ ರಾಜನೀತಿಯನ್ನೂ ಧರ್ಮನೀತಿಯನ್ನೂ ಬೋಧಿಸುವುದನ್ನು ಮರೆಯಲಿಲ್ಲ. ತಾಯಿಯ ದಿಗ್ದರ್ಶನದಲ್ಲಿ ಮಗನು

ಮಣಿಪುರವನ್ನು ಆದರ್ಶ ರಾಜ್ಯವನ್ನಾಗಿ ಕಟ್ಟಿದನು.

"..................ಮಣಿಪುರಂ
ಚಿತ್ತರಿಸಿ ಶೋಭಿಸಿತು. ಸೌಂದರ್ಯ ಸ್ವಾತಂತ್ರ್ಯ
ಸಂಸ್ಕೃತಿಗಳಂವೆರಸಿ ಧೈರ್ಯಶೌರ್ಯಂಗಳಿಂ
ಶಾಂತಿಯಿಂ ನಲಿದತ್ತು ಜನಪದಂ ನಿಚ್ಚ ಮಾ!"

—ಪು. ೬೯

ಮಹಾಭಾರತದ ಯುದ್ಧ ಪ್ರಾರಂಭವಾದುದನ್ನು ಕೇಳಿ ಚಿತ್ರಾಂಗದೆ ಪಾಂಡವರ ಮೇಲ್ಮೆಗಾಗಿ ಪ್ರಾರ್ಥಿಸಿದಳು.

"...............ಪಾರ್ಥಂಗೆ ಗೆಲಮಕ್ಕೆ !
ಅರ್ಜುನಗೆ ಸೊಗಮಕ್ಕೆ ! ಜಯವಧು ಸನತಿಯಕ್ಕೆ !
ಧರ್ಮ ಸಂಸ್ಥಾಪಕಂ ದೇವಕೀನಂದನಗೆ
ನಿತ್ಯಮಂಗಳಂಮಕ್ಕೆ ! ಲೋಕಕ್ಕೆ ಶಾಂತಿಯಕ್ಕೆ!"

—ಪು. ೭೦

ಈ ಪ್ರಾರ್ಥನೆಯೊಡನೆ ಅವಳು ವ್ರತವನ್ನಾಚರಿಸಿದಳು. ತಾಯಿಯ ನೋಂಪಿಯ ಕಾರಣವನ್ನು ಕೇಳಿ ತಿಳಿದು ತಾನು ಪಾರ್ಥನಿಗೆ ನೆರವಾಗಬೇಕೆಂದು ಬಭ್ರುವಾಹನನು ಇಚ್ಛಿಸಿದನು. ಕರೆಯದೆ ಹೋಗುವುದು ಸರಿಯಲ್ಲವೆಂದು ಚಿತ್ರಾಂಗದೆ ವಿವೇಕ ಹೇಳಿದಳು ಮಗನಿಗೆ. ಲೌಕಿಕವನ್ನೂ ಸಮಯಾಚಾರವನ್ನೂ ತಿಳಿದವಳಾಕೆ. ಈ ಸಂದರ್ಭದಲ್ಲಿಯಾದರೂ ಮಗನಿಗೆ ಪಾರ್ಥನೆ ತಂದೆಯೆಂಬುದನ್ನು ಹೇಳಲಿಲ್ಲ. ಅವಳು ಇನ್ನೂ ಗರ್ಭಿತ ರಹಸ್ಯೆ !

ಕಾಲ ಉರುಳಿತು. ಅರ್ಜುನನ ಯಜ್ಞದ ಕುದುರೆಯನ್ನು ಬಭ್ರುವಾಹನನು ಕಟ್ಟಿಹಾಕಿ ಯುದ್ಧಮಾಡಲು ತಾಯಿಯ

"....................ಹೋಗು ನಡೆ ಬೇಗದಲಿ;
ತಳುವಿದರೆ ಬೀಳುವುದು ಪಾರ್ಥನ ಕಳೇಬರಂ
ರಣಧರೆಗೆ: ತೊಡಗಿದೆ ನಿಶಾಯುದ್ಧಮಿಾ ರಾತ್ರಿ;
ನಿನ್ನ ಹೃದಯದ ಬಲಿಯನಿತ್ತು ರಣದೇವತೆಗೆ,
ಕೆರಳ್ದ ಬದಿಯಂ ತಣಿಸಿ, ಪತಿಸುತರ್ಗಿರ್ವರ್ಗೆ
ನೀಂ ಶುಭಂಕರಿಯಾಗು, ನಡೆ, ಹೋಗು ಬೇಗದಲಿ!"

—ಪುಟ ೮೪

ಎಂಬ ಆದೇಶವನ್ನು ನೀಡಿತು. ಚಿತ್ರಾಂಗದೆ ಬೇಗನೆ ಅರಮನೆಯನ್ನು ಸೇರಿ ತಾನುಟ್ಟ ನಾರುಡೆಯಲ್ಲಿಯೇ ಬಿಳಿಯ ಕುದುರೆಯನ್ನೇರಿ ಬಿಳಿಯ ಪತಾಕೆಯನ್ನು ಹಿಡಿದು ಶಾಂತಿಸ್ವನದ ತೂರ್ಯವನ್ನೂದುತ್ತ ರಣರಂಗಕ್ಕೆ ಧಾವಿಸಿದಳು. ಯಮಾಲಯದಂತಿದ್ದ ರಣರಂಗದ ಮಧ್ಯೆ ಕುದುರೆ ಓಡಿತು, ಅರ್ಜುನ ಬಭ್ರುವಾಹನರಿಗೆ ಘೋರ ಯುದ್ಧ ನಡೆಯುತ್ತಿದ್ದ ಸ್ಥಳಕ್ಕೆ. ರಣರಂಗದಲ್ಲಿ ಅತ್ತ ಇತ್ತ ಮಿಂಚಿನ ವೇಗದಲ್ಲಿ ಹೋಗುತ್ತಿದ್ದ ಬಾಣಗಳಲ್ಲಿ ಕೆಲವು ಅವಳ ದೇಹವನ್ನು ಮುತ್ತಿದುವು. ಆ ನೋವಿನಿಂದ ತತ್ತರಿಸುತ್ತ ಅವಳು ಕುದುರೆಯಿಂದ ಇಳಿಯುತ್ತಿದ್ದಂತೆಯೆ ಧೊಪ್ಪನೆ ಬಿದ್ದಳು. ಪತಿಸುತರಿಬ್ಬರೂ ಅವಳ ಬಳಿಗೆ ಓಡಿದರು. ಇದುವರೆಗೆ ಗರ್ಭಿತ ರಹಸ್ಯವಾದ ಚಿತ್ರಾಂಗದೆ ತನ್ನ ಕೊನೆಯ ಗಳಿಗೆಯಲ್ಲಿ ಎಲ್ಲವನ್ನೂ ಹೇಳಿ ಪತಿಸುತರ ಮೈತ್ರಿಯಾಗಲೆಂದು ಪ್ರಾರ್ಥಿಸಿ ಕೊನೆಯ ಉಸಿರನ್ನೆಳೆದಳು.

"................................ಚಿತ್ರೆ
ಹೇಳಿದಳು ತನ್ನ ಕಥೆಯಾದ್ಯಂತಮಂ, ಬಹುಲ
ಸಂಕ್ಷೇಪದಿಂದೆ. ನರನಾಮಾಂಕಿತದ ಮುದ್ರೆಯಂ
ಶ್ರೀಯುಂಗುರುಪನಿತ್ತ ಭಾತನ ಕೈಗೆ ಸಾಕ್ಷಿಯಂ

ಕೈಯೊಂದರೊಳ್ ಮಗನ ಮತ್ತೊಂದರೊಳ್ ಪತಿಯ
ಪಾಣಿಯಂ ಪಿಡಿದು, ಸಂಧಿಯನೊರೆದು, ಶಾಂತಿಯಂ
ನುಡಿದು. ಶಾಂತಾತ್ಮದಿಂ ಶಿವನಾಮಮಂ ಸ್ಮರಿಸಿ
ಕಣ್ಣುಮುಚ್ಚಿದಳಮೃತಮಯ ಚಿರಸಮಾಧಿಯಲಿ!"

—ಪುಟ ೮೮

ಅವಳ ಚರಮ ಸಂಸ್ಕಾರ ಸಕಲ ರಾಜಮರ್ಯಾದೆಯಿಂದ ನಡೆಯಿತು. ಪ್ರಕೃತಿಯೂ ದುಃಖದಿಂದ ಕಣ್ಣೀರಿಡುವಂತೆ ಸೋನೆ ಮಳೆ ಸುರಿಯಿತು. ಅವಳ ನೆನಪಿಗಾಗಿ ಸ್ಮಾರಕ ನಿಕೇತನ ಸ್ತೂಪವೊಂದು ಅಮೃತಶಿಲೆಯಲ್ಲಿ ನಿರ್ಮಾಣ ವಾಯಿತು.

"..............................ತಿರಿಯೊಲ್ಮೆ
ಸಿರಿವೆತ್ತ ಸಗ್ಗನೀಲಿಗೆ ಮುತ್ತ ಕೊಡುವಂತೆವೋಲ್
ಮಣಿಪುರ ಮನದ ಮಹಾಸ್ಮೃತಿಸುಧಾಶಿವರೂಪಿ ತಾಂ
ಮೆರೆದುದಾ ಮೂಕಶೋಕದ ಶಿಲೆಯ ಸಂಗೀತೆ!"

—ಪುಟ ೯೦

ಅವಳ ಶುದ್ಧ ಜೀವನವನ್ನು ಪ್ರತಿಬಿಂಬಿಸುವ ನಿರ್ಮಲ ಸ್ಮಾರಕ! ಚಿತ್ರಾಂಗದೆ ಬದುಕಿ ಉಳಿಯಬೇಕಾಗಿತ್ತು. ಆದರೆ "ಬಂದ ವಿಧಿಗೆ ಕಣ್ಣಿಲ್ಲ." ಗರ್ಭಿತ ರಹಸ್ಯವಾಗಿರುವ ಅವಳ ಮನೋವೃತ್ತಿ ವಿಧಿಯ ಕಾರ್ಯವನ್ನು ತ್ವರಿತಗೊಳಿಸಲು ಕಾರಣವಾಯಿತು. ರಾಜ್ಯಸೂತ್ರವನ್ನು ಹಿಡಿದು ರಾಣಿಯಾದಾಗ ತನಗಿದ್ದ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಂಡು ದಾರಿ ತಪ್ಪಬಹುದಿತ್ತು. ಅಂಥ ಹೀನವೃತ್ತಿಗೆ ಮನಸ್ಸು ಕೊಡದೆ ವೀರ ಮಾತೆಯಾಗಿ, ಮಗನನ್ನು ವೀರಪುರುಷನನ್ನಾಗಿ ಬೆಳಸಿ, ಧರ್ಮ ಮಾರ್ಗದಲ್ಲಿ ನಡೆವಂತೆ ಮಾಡಿ ರಾಜ್ಯವನ್ನು ಸುಖಪ್ರದವಾಗಿ

ಮಾಡಿದ ಕೀರ್ತಿ ಅವಳದು. ಒಬ್ಬ ಮಹಿಳೆಯ ಜೀವನದಲ್ಲಿ ಇದಕ್ಕಿಂತ ಹೆಚ್ಚಿನ ಯಶಸ್ಸು ಬೇರೆ ಏನಿದ್ದೀತು? ಎನಿಸುತ್ತದೆ. ಅಂತ್ಯದಲ್ಲಿ ತಪಸ್ವಿನಿ ಚಿತ್ರಾಂಗದೆ ಪತಿಸುತರ ಹಿತಕ್ಕಾಗಿ ಆತ್ಮಾರ್ಪಣೆ ಮಾಡಿಕೊಳ್ಳುವ ಚಿತ್ರವಂತೂ ಅವಳ ಜೀವನಕ್ಕೆ ಕಳಶವಿಟ್ಟಂತಾಗಿದೆ. ಕಾವ್ಯದಲ್ಲಿ ಬರುವ ಚಿತ್ರಾಂಗದೆಯ ತುಂಬು ಪಾತ್ರ ಓದುಗರ ಮನಸ್ಸಿನಲ್ಲಿ ಹಿರಿದಾದ ಭಾವಗಳನ್ನು ಮೂಡಿಸಿ ಅವಳಲ್ಲಿ ಅನುಪಮವಾದ ಗೌರವವನ್ನು ಮೂಡಿಸುತ್ತದೆ.

**ಅರ್ಜುನ :**

ಅರ್ಜುನನು ವೀರಪುರುಷ. ಶ್ರೀಕೃಷ್ಣನ ಸ್ನೇಹವೂ ಅವನಿಗೆ ಲಭಿಸಿತ್ತು. ತನ್ನ ಬಿಲ್ಲಿನ ಸಾಮರ್ಥ್ಯದಿಂದ ದ್ರೌಪದಿಯನ್ನು ಪಡೆದ ಕೀರ್ತಿ ಅವನದು. ನಾರದರು ನಿಯಮಿಸಿದ್ದ ನಿಯಮಕ್ಕೆ ಭಂಗ ಬಂದುದರಿಂದ ಯತಿವೇಷದಲ್ಲಿ ತೀರ್ಥಯಾತ್ರೆಗೆ ಹೊರಟಿದ್ದನು. ಅದೂ ಹನ್ನೆರಡು ವರುಷ! ಮಣಿಪುರದ ಬಳಿಯ ಕಾಡಿನಲ್ಲಿ ಚಿತ್ರಾಂಗದೆ ಅವನನ್ನು ನೋಡಿದಳು. ಅದೇ ಮೊದಲ ಬಾರಿ ಕಾವ್ಯದಲ್ಲಿ ಅರ್ಜುನನ್ನು ಕಾಣುವುದು.

"ಕಾಷಾಯ ಭೂಷಿತಂ, ಪಾವನ ಜಟಾಧಾರಿ,
ಮನ್ಮಥಂಗೆಣೆಯಪ್ಪ ಫಾಲಾಕ್ಷ ಸನ್ನಿಭಂ,"

—ಪುಟ ೧೦

ಇಂಥ ಸುಂದರ ರೂಪದಲ್ಲಿ ಚಿತ್ರಾಂಗದೆಗೆ ಕಾಣಿಸಿದನು. ಅವನ ಅಸಾಧಾರಣವಾದ ಸೌಂದರ್ಯವನ್ನು ಕಂಡು ಅವಳು ಆಕರ್ಷಿತಳಾದಳು. ಅವನ ಸೌಂದರ್ಯದೊಡನೆ ಗಾಂಭೀರ್ಯದ

ರೀತಿಯೂ ಇತ್ತು. ಚಿತ್ರಾಂಗದೆಯನ್ನು ಮೊದಲು ಮಧುರ ಗಂಭೀರ ವಚನದಿಂದಲಿ ಮಾತನಾಡಿಸಿದನು.

> "ಆರು ನೀನೆಲೆ ತರುಣ ವೀರ? ವಿಪಿನಾಂತರದಿ
> ಇನಿತು ಮುಂಬೊಳ್ತಿನೊಳಗೇಂ ಗೆಯ್ಯು ತಿರುಗುತಿಹೆ?
> ಚೈತ್ರ ಪ್ರಭಾತದೀ ರಮ್ಯತಾಸ್ವಾದನೆಯೊ,
> ಮೃಗಯಾ ವಿನೋದಮೋ, ನಿನಗಾವುದಕ್ಕೆ ಪೇಳ್?
> ನುಡಿ, ಅಂಜದಿರು; ನಾವು ಮುನಿವ ಮುನಿವರರಲ್ಲ!"

— ಪುಟ ೧೨

ಇದು ಅವನು ಮಾತನಾಡಲುಪಕ್ರಮಿಸಿದ ರೀತಿ. "ಅಂಜದಿರು" ಎಂಬ ಮಾತು ಚಿತ್ರಾಂಗದೆಗೆ ಒಗ್ಗದೆ "ನೀನಾರೆಲೆ ತಪಸ್ವಿ"? ಎಂದು ಕೇಳಿದಾಗ ಅರ್ಜುನನು "ಕೊಂಕು ನುಡಿ ಸರಳನು" ಎಸೆದನು. ತಾನಾರು ಎಂಬುದನ್ನು ತಿಳಿಸಲು ಒಂದು ಉಪನ್ಯಾಸವನ್ನು ಪ್ರಾರಂಭಿಸಿದನು. ಅವನ ಮಾತಿನಲ್ಲಿ ತಾನು ವೀರನೆಂಬ ಅಹಂಕಾರ ತುಂಬಿತ್ತು. ನೇರವಾಗಿ ಮಾತನಾಡುವುದಕ್ಕೆ ಬದಲಾಗಿ ಅವನು ಮಾತನಾಡುವ ರೀತಿ ಮತ್ತೊಬ್ಬರ ಮನಸ್ಸನ್ನು ಚುಚ್ಚುವಂತೆ.

> "ಕೇಳಿ ಬಲ್ಲೆಯ ಯುಧಿಷ್ಠಿರ ಭೀಮರೆಂಬರಂ?
> ನಕುಲ ಸಹದೇವರಂ? ಪಾರ್ಥನೆಂಬಾತನಂ?
> ಶ್ರೀಕೃಷ್ಣನೆಂಬೊರ್ವ ಗೊಲ್ಲನಂ?—ನೀನರಿಯೆ:
> ಅಖ್ಯಾತರಲ್ಪರಜ್ಞಾತರವರನಿಬರುಂ!
> ನೀಂ ಜಗದ್ವಿಖ್ಯಾತ ವನಚರಂ! ನಿನಗೆಂತು
> ವೇದ್ಯಮಪ್ಪುದಜ್ಞಾತರಿತಿಹಾಸಮದು?..."

— ಪುಟ ೧೩-೧೪

ಇಷ್ಟೆಲ್ಲಾ ಹೇಳಿ ಅನಂತರ ತಾನು ಅರ್ಜುನನು ಎಂದು ತಿಳಿಸಿ ಸಿಂಹಗಾಂಭೀರ್ಯವನ್ನು ಪ್ರಕಟಿಸುತ್ತ ಅಲ್ಲಿ ನಿಲ್ಲದೆ ಅಡವಿಯೊಳಗೆ ಹೊರಟುಹೋದನು. ಅವನ ಆಕಾರದಲ್ಲಿ, ನಡಿಗೆಯಲ್ಲಿ ಗಾಂಭೀರ್ಯವಿದ್ದರೂ ಅವನ ಮಾತುಗಳನ್ನು ಕೇಳಿದಾಗ ಅವನಲ್ಲಿ ಗೌರವ ಮೂಡುವುದಿಲ್ಲ. ಅವನು ರಜೋಗುಣ ಪ್ರಧಾನನಾದ ವ್ಯಕ್ತಿಯೆಂಬುದಕ್ಕೆ ಅವನ ಮಾತುಗಳೇ ಸಾಕ್ಷಿ.

ಹೀಗೆಂದ ಮಾತ್ರಕ್ಕೆ ಅವನು ಸಂಯಮವಿಲ್ಲದ ವ್ಯಕ್ತಿಯೆಂದು ಹೇಳುವಂತಿಲ್ಲ. ಅವನನ್ನು ಒಲಿಸಿಕೊಳ್ಳಲು ಆಭರಣಗಳಿಂದ ಅಲಂಕೃತಳಾದ ಚಿತ್ರಾಂಗದೆ ರಾತ್ರಿಯ ವೇಳೆಯಲ್ಲಿ ಬಂದಾಗ, ಸಿಕ್ಕಿದ್ದೇ ಲಾಭವೆಂದು ಅವಳಲ್ಲಿ ಅನುರಕ್ತನಾಗಲಿಲ್ಲ. ಪ್ರಣಯ ಭಿಕ್ಷೆಯನ್ನು ಬೇಡುತ್ತ ನಿರ್ಜನವಾದ ಅರಣ್ಯದಲ್ಲಿ ಚಿತ್ರಾಂಗದೆ ನಿಂತಾಗ

"............................ವರ್ತಿಪರೆ
ನಾಗರಿಕರೀ ರೀತಿ ಪ್ರಣಯ ಪ್ರಸಂಗದಲಿ ?
.........ನೀಂ ಬಂದ ಬಟ್ಟೆಯೊಳೆ ತೆರಳ್
ಕ್ಷೇಮದಿಂ."

—ಪುಟ ೨೪

ಎಂದು ಹೇಳುವ ಅವನ ಯತಿವೇಷಕ್ಕೆ ಸಹಜವಾದ ವೈರಾಗ್ಯ ಪ್ರಕಟವಾಗುತ್ತದೆ. ಇಷ್ಟು ಮಾತನಾಡಿ ಸುಮ್ಮನಿರದೆ ಅವಳ ಸಾಮಾನ್ಯ ರೂಪವನ್ನು ಕುರಿತು

"ನೀನಾವ ಪಾರ್ಥಿವ ಕುಲಾಂಬುಧಿಯ ಕಡೆಹದಲಿ
ಮೂಡಿರುವ ಕೌಸ್ತುಭಂ? ಮೇಣ್ ನಿನಗದೇನಿಹುದೊ
ಸೌಂದರ್ಯ ಸಂಪದಂ? ಚಿತ್ರದ ಲೋಕದೊಳ್
ಕೇವಲ ಕನಿಷ್ಠರೆನೆ ನಿನಗಿಂತಲುತ್ತಮರ್!"

—ಪುಟ ೨೪–೨೫

ಎಂದು ಹೇಳುವ ಅವನ ಮಾತುಗಳು ಅವನ ವೈರಾಗ್ಯವೆಂಬುದು ರಜೋಗುಣದ ಮೇಲೆ ಬಲಾತ್ಕಾರವಾಗಿ ಹೇರಲ್ಪಟ್ಟ ಒಂದು ಸಾತ್ವಿಕ ರೂಪದ ವ್ರತವೆಂಬುದು ಸುಪ್ರಕಟವಾಗುತ್ತದೆ. ಅವನ ಯತಿವೇಷದ ಬೂದಿಯ ಒಳಗಡೆ ರಾಗದ ಬೆಂಕಿ ಇರುವುದಕ್ಕೆ ಈ ಮಾತುಗಳು ನಿದರ್ಶನ.

ಇಷ್ಟೆಲ್ಲ ಮಾತುಗಳಿಂದ ತಿರಸ್ಕರಿಸಿದ ಅರ್ಜುನನು ಮದನನ ವರವನ್ನು ಪಡೆದು ಮೋಹನ ರೂಪವನ್ನು ತಾಳಿ ಚಿತ್ರಾಂಗದೆ ಕಾಣಿಸಿಕೊಂಡಾಗ ಅವನ ವಿಷಯಾಸಕ್ತಿ ಉದ್ರೇಕವಾಗಿ ಅವಳನ್ನು ಪಡೆಯಲು ಕಾತರನಾಗುವುದನ್ನು ಕಾಣುತ್ತೇವೆ. ಚಿತ್ರಾಂಗದೆ ಮಾತಿನಲ್ಲಿ ಸಂಯಮವನ್ನು ತೋರಿದಾಗ ಶಿವನ ದೇವಾಲಯದೆದುರಿನಲ್ಲಿಯೆ ಅವಳ ಪ್ರಣಯ ಭಿಕ್ಷೆಗಾಗಿ ಬೇಡಿದನು

"ಇದೊ ದೇವಿ, ಮಣಿದ ಮೊಳಕಾಲಿನಲಿ ಸೆರಗೊಡ್ಡಿ
ಶರಣಾರ್ಥಿಯಾಗಿರುವನರ್ಜುನಂ!"

—ಪುಟ ೩೮

ವ್ರತ ನಿಯಮದಲ್ಲಿರುವವನಿಗೆ ಇದೆಂಥ ದುರವಸ್ಥೆ! ಆದರೆ ಅದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಲ್ಲ. ಗಂಡುವೇಷದಲ್ಲಿ ಸುಳಿದ ಚಿತ್ರಾಂಗದೆಯ ಮುಖದ ಹೆಣ್ಣು ಚೆಲ್ವು ಅವನಿಗೆ ತಿಳಿಯದಂತೆ ಅವನ ಹೃದಯದಲ್ಲಿ ಮುದ್ರಿಸಿತ್ತು. ಆ ತರುಣನ ಸಹೋದರಿಯೆಂದು ಹೇಳಿಕೊಂಡು ಸ್ತ್ರೀ ಸಹಜವಾದ ಶೃಂಗಾರವನ್ನು ತಿಳಿಯದೆ ರಾತ್ರಿ ಬಂದ ಚಿತ್ರಾಂಗದೆಯ ರೂಪ ಅವನ ವೈರಾಗ್ಯದ ಮೇಲೆ ಅವನಿಗೆ ತಿಳಿಯದಂತೆಯೆ ಪರಿಣಾಮ ಮಾಡಿತ್ತು. ಮರುದಿನ ಬೆಳಗ್ಗೆ ಪ್ರಕೃತಿಯ ಅನುಪಮ

ಸೌಂದರ್ಯ, ಅವನ ಭೋಗಾಪೇಕ್ಷೆಯನ್ನು ಕೆರಳಿಸಿದ ಸಮಯ ದಲ್ಲಿ ಸರೋವರದ ಬಳಿ ಮದನನ ವರದಿಂದ ಹಿಗ್ಗಿ ತನ್ನ ಅಂಗಾಂಗ ಗಳ ಸೌಂದರ್ಯವನ್ನು ನೋಡಿಕೊಳ್ಳುತ್ತಿದ್ದ ಚಿತ್ರಾಂಗದೆಯನ್ನು ನೋಡಿದೊಡನೆ ಅವನ ವಿಷಯಾಸಕ್ತಿ ಕೆರಳಿ ಅವನ ವೈರಾಗ್ಯದ ಕಟ್ಟೆ ಒಡೆದುಹೋಯಿತು. ಸ್ವಧರ್ಮದಲ್ಲಿ ಅವನದು ಕ್ಷಾತ್ರವೃತ್ತಿ. ಆಗುಂತುಕವಾಗಿ ಬಂದ ವೈರಾಗ್ಯಪ್ರಣಯಾಸಕ್ತಿಯಿಂದ ಕರಗಿ ಹೋಯಿತು.

ಒಂದು ತಿಂಗಳ ಕಾಲ ಅರ್ಜುನನು ಚಿತ್ರಾಂಗದೆಯೊಡನಿದು ಮಧುಮಯ ಸುಖದಲ್ಲಿ ತೇಲಿದನು. ಅವಳ ಹೆಸರು, ಮನೆ ತಂದೆ. ತಾಯಿ — ಇವರ ವಿಚಾರವನ್ನು ತಿಳಿಯಲು ಕುತೂಹಲ ವನ್ನು ತೋರಿದನು. ಇಲ್ಲಿ ಅವನ ಮಾನವೀಯ ಹೃದಯವನ್ನು ಕಾಣಬಹುದು. ಆದರೆ ಅವನು ಅವಳ ಯಶಸ್ಸಿನ ಕಡೆಗೆ ಗಮನ ಪಿಟ್ಟಿದ್ದರೆ ಅವಳ ತಂದೆಯ ವಿಚಾರವನ್ನು ಹೇಗಾದರೂ ತಿಳಿದು ಮಣಿಪುರಕ್ಕೆ ಹೋಗಿ ಚಿತ್ರವಾಹನನ್ನು ಮೆಚ್ಚಿಸಿ ವಿವಾಹವಾಗು ವುದು ಉತ್ತಮ ಮಾರ್ಗವಾಗಿತ್ತು. ಹಾಗೆ ಮಾಡಿದ್ದರೆ ಅವನ ಘನತೆ ಗೌರವಗಳೂ ಹೆಚ್ಚಾಗುತ್ತಿತ್ತು. ಅವನ ಹೃದಯದಲ್ಲಿ ಮಾನವೀಯತೆಯ ಕಂಪನವಿದ್ದರೂ ಕಾಮುಕನೊಬ್ಬನು ಕೈಗೆ ಸಿಕ್ಕಿದ ಹೆಣ್ಣನ್ನು ಹೀರಿಬಿಡುವ ಲಘು ಮನೋವೃತ್ತಿ ಪ್ರಕಟ ವಾಗುತ್ತದೆ. ಚಿತ್ರಾಂಗದೆಯಿಂದ ಪಡೆವುದನ್ನು ಪಡೆದ ಮೇಲೆ ಅವಳ ಸರಳ ಸಾಮಾನ್ಯ ಸೌಂದರ್ಯವನ್ನು ಕಂಡು ಅವನಿಗೆ ಆಶ್ಚರ್ಯ. ಅಷ್ಟು ಹೊತ್ತಿಗೆ ಮದನನು ಚಿತ್ರಾಂಗದೆಗೆ ಅನು ಗ್ರಹಿಸಿದ ಒಂದು ತಿಂಗಳ ಅವಧಿಯೂ ಮುಗಿದಿತ್ತು. ಕೊನೆಯ ರಾತ್ರಿ ತಿಂಗಳಾರಕೆ ಮತ್ತೆ ಬರುವೆನೆಂಬ ನಂಬಿಕೆಯನ್ನಿತ್ತು

ಅವಳನ್ನು ಕಷ್ಟದಿಂದ ಒಡಂಬಡಿಸಿ ಮರುದಿನ ಅವಳು ಏಳುವ ಮೊದಲೆ ಅವಳ ಕೈಗೆ ತನ್ನ ಉಂಗುರವನ್ನು ತೊಡಿಸಿ ಬಿಡಲಾರದೆ ಬಿಟ್ಟು ಹೊರಟನು. ಅವನ ಹೃದಯವು ಕರುಣಾಪೂರ್ಣವಾದರೂ ಹೆಚ್ಚಿನ ವಿವೇಕ ಮಾತ್ರ ಪ್ರಕಟವಾಗುವುದಿಲ್ಲ.

ಆರು ತಿಂಗಳಲ್ಲಿ ಬರುವುದು ಅರ್ಜುನನಿಗೆ ಸಾಧ್ಯವಾಗದೆ ಕಾರಣಾಂತರದಿಂದ ಎರಡು ತಿಂಗಳು ಹೊತ್ತಾಗಿ ಬಂದನು. ಇನಿಯಳನ್ನು ಕಾಣದೆ ಮಮ್ಮಲ ಮರುಗಿದನು. ಇನಿಯಳನ್ನು ನೆನೆಯುದಕ್ಕಾಗಿ ಒಂದು ರೀತಿಯ ಸಹಾನುಭೂತಿ ಅವನಲ್ಲಿ ಮೂಡುತ್ತದೆ. ಚಿತ್ರಾಂಗದೆಯನ್ನು ಕಾಣದೆ ಅರ್ಜುನನು ಉತ್ತರ ದಿಕ್ಕಿಗೆ ಪ್ರಯಾಣಮಾಡಿ ಇಂದ್ರಪ್ರಸ್ಥವನ್ನು ಸೇರಿದನು. ಕಾಲ ಕಳೆಯಿತು. ಭಾರತದ ಮಹಾಯುದ್ಧ ಪ್ರಾರಂಭವಾಯಿತು. ಘೋರ ಸಂಗ್ರಾಮದಲ್ಲಿ ನಿರತನಾದ ಅವನು. ಹೆಸರನ್ನು ತಿಳಿಯದ ತರುಣಿಯ ಪ್ರಣಯವನ್ನು ಮರೆತುಬಿಟ್ಟನು.

ಭಾರತದ ಯುದ್ಧವು ಮುಗಿದು ಅಶ್ವಮೇಧ ಯಜ್ಞದ ಕುದುರೆಯನ್ನು ಹಿಂಬಾಲಿಸಿ ಅರ್ಜುನನು ಮಣಿಪುರಕ್ಕೆ ಬಂದನು. ಹಂಸಧ್ವಜನಿಂದ ಚಿತ್ರಾಂಗದೆಯ ವಿಚಾರವನ್ನು ತಿಳಿದು ಮಣಿಪುರದ ಬಳಿ ಕಾಡಿನಲ್ಲಿ ಹಿಂದೆ ತಾನು ಒಲಿದ ತರುಣಿಯನ್ನು ನೆನೆದು ಪರೀಕ್ಷಿಸಬೇಕೆಂದು ವೇಷ ಮರೆಸಿಕೊಂಡು ಹೋಗಿ ಪರ್ಣಕುಟಿಯಲ್ಲಿ ನೋಡಿದನು. ತಪಸ್ವಿನಿಯಾದ ಚಿತ್ರಾಂಗದೆಯನ್ನು ಗುರುತಿಸುವುದು ಅವನಿಗೆ ಸಾಧ್ಯವಾಗಲಿಲ್ಲ.

"......................ಅವಳೆಲ್ಲಿ ಇವಳೆಲ್ಲಿ ?
ಸರ್ವ ಸೌಂದರ್ಯ ಸಾರವದು ! ನಿಸ್ಸಾರವಿದು!"

—ಪುಟ ...

ತಾಯ್ತನದ ಗೌರವದಿಂದ ತಪಸ್ವಿನಿಯಾಗಿದ್ದ ಚಿತ್ರಾಂಗದೆ ಭಾರತದ ಜಯದ ಗುಂಗಿನಿಂದ ಬರುತ್ತಿದ್ದ ಅರ್ಜುನನಿಗೆ ನಿಸ್ಸಾರವಾಗಿ ಕಂಡಳು. ಅವನಲ್ಲಿ ಸ್ವಲ್ಪಮಟ್ಟಿಗೆ ಸಾತ್ತ್ವಿಕ ಶಕ್ತಿ ಇದ್ದಿದ್ದರೆ ತಪಸ್ವಿನಿಯಾದ ಚಿತ್ರಾಂಗದೆಯನ್ನು ಕಂಡು ಮಾತನಾಡುತ್ತಿದ್ದನು. ಆದರೆ ಆ ರೀತಿ ವರ್ತಿಸದೆ ಪಾಳಯಕ್ಕೆ ಹಿಂತಿರುಗಿದನು. ತನ್ನ ಪ್ರೇಯಸಿಯನ್ನು ನೆನೆದು ಸಂದೇಹ ನಿವಾರಣೆಗಾಗಿಯಾದರೂ ಚಿತ್ರಾಂಗದೆಯನ್ನು ನೋಡಿಕೊಂಡು ಬಂದುದಕ್ಕಾಗಿ ಅವನಲ್ಲಿ ಸ್ವಲ್ಪಮಟ್ಟಿಗೆ ಗೌರವ ಮೂಡುತ್ತದೆ.

ಬಭ್ರುವಾಹನನು ತಾಯಿಯ ಆದೇಶದಂತೆ ಅರ್ಜುನನನ್ನು ಸ್ವಾಗತಿಸಲು ಬಂದು ಸಾಷ್ಟಾಂಗ ನಮಸ್ಕಾರ ಮಾಡಿದಾಗ ಅವನನ್ನು ಕಂಡುದು ಅತಿ ತಿರಸ್ಕಾರದಿಂದ. ಭಾರತದ ಜಯದೊಡನೆ ಅನೇಕ ರಾಜರನ್ನು ಗೆದ್ದು ವೀರಪಾನೋನ್ಮತ್ತನಾಗಿ ಬರುತ್ತಿದ್ದ ಅರ್ಜುನನಿಗೆ ಬಭ್ರುವಾಹನನು ಗೌರವವನ್ನು ತೋರಿ ಸ್ವಾಗತಿಸಲು ಬಂದಾಗ ಅವನು ತೋರಿದ ಗೌರವಕ್ಕೆ ಪ್ರತಿಯಾಗಿ ಸೌಜನ್ಯವನ್ನಾದರೂ ತೋರಬೇಕೆಂಬ ಬುದ್ಧಿ ಬಾರದೆ ಹೋದುದನ್ನು ಕಂಡಾಗ ಅವನಲ್ಲಿ ಉಂಟಾದ ಅಲ್ಪ ಸ್ವಲ್ಪ ಗೌರವವೂ ಮಾಯವಾಗುತ್ತದೆ. ಅರ್ಜುನನು ಬಭ್ರುವಾಹನನಿಗಿಂತ ವಯಸ್ಸಿನಲ್ಲಿ ಅನುಭವದಲ್ಲಿ ಎಷ್ಟೋ ದೊಡ್ಡವನು. ಆದರೂ ಸಂಸ್ಕೃತಿಯಿಲ್ಲದ ಅರ್ಜುನನಿಗೆ ಬಭ್ರುವಾಹನನು ಬುದ್ಧಿ ಕಲಿಸಲೆಂದು

> "......................ಎಲೆವೆಲೆವೊ
> ಸದ್ರುಚಿ ವಿಹೀನ, ಸಂಸ್ಕೃತಿ ಬಾಹಿರ, ಕಿರಾತ,
> ಜಯಮದಾಂಧನೆ, ಪಾರ್ಥನೆ, ಗೌರವವರಿಯೆಯಲಾ!
>
> —ಪು. ೭೮.

ಎಂದು ಆರ್ಭಟಿಸಿ ಯುದ್ಧಕ್ಕೆ ಅಣಿಯಾದನು. ಆಗ ಅರ್ಜುನ ಮಾತನಾಡುವುದು ನಾಲಿಗೆಗೆ ಕಡಿವಾಣವಿಲ್ಲದಂತೆ.

"..............................ತಂದೆಯಿಲ್ಲದೆ ಹುಟ್ಟಿ
ಹಾದಿಯಾದೆಲವೊ ನಿನ್ನಯ್ಯನೇಂ ಬಳಿಕೆಂಟು
ನಟ್ಟುವನೊ ?"

—ಪ್ರ. ೮೦

ಘೋರ ಸಂಗ್ರಾಮ ನಡೆದು ಅರ್ಜುನನ ಸೈನ್ಯದ ಬಹುಭಾಗ ನಾಶವಾಗಿ ಇನ್ನೇನು ಅರ್ಜುನನು ಬಲಿಯಾಗುವ ಹೊತ್ತು ಸಮೀಪಿಸಿದಾಗ ಚಿತ್ರಾಂಗದೆ ಶುಭಂಕರಿಯಾಗಿ ಬಂದು ಮಗನು ಬಾಣ ಪ್ರಯೋಗಮಾಡದಂತೆ ತಡೆದು ಅರ್ಜುನನನ್ನು ಬದುಕಿಸಿದಳು. ಅರ್ಜುನನಿಗೆ ಬಂದ ವಿಪತ್ತು ಚಿತ್ರಾಂಗದೆಯನ್ನು ಕಬಳಿಸಿತು. ಚಿತ್ರಾಂಗದೆ ಕುಸಿದು ಬಿದ್ದಾಗ ಅರ್ಜುನ ತನ್ನ ರಥದಿಂದ ಧುಮುಕಿ ಓಡಿ ಬಂದು ಆವಳ ಶುಶ್ರೂಷೆ ಮಾಡಿದನು.

"..................................ತನ್ನ
ಸೆರಗಿನೆಲರಂ ಬೀಸಿ, ತರಿಸಿ ನೀರಂ, ನೀಡಿ,
ಮಾಡಿದನು ಶುಶ್ರೂಷೆಯಂ"

—ಪ್ರ. ೮೩

ದಾರುಣವಾದ ಸಮಯದಲ್ಲಿ ಚಿತ್ರಾಂಗದೆಯ ಶುಶ್ರೂಷೆ ಮಾಡಿದ ಅರ್ಜುನನ ಅಂತರಂಗದಲ್ಲಿ ಸುಪ್ತವಾಗಿರುವ ಹಿರಿಯ ಸಂಸ್ಕೃತಿಯನ್ನು ಕಾಣುತ್ತೇವೆ ಅವನ ಈ ಉತ್ತಮ ಗುಣ ಅವನ ಹಿಂದಿನ ತಪ್ಪುಗಳನ್ನು ಮರೆಯುವಂತೆ ಮಾಡುತ್ತದೆ. ಚಿತ್ರಾಂಗದೆ ಕೊನೆಯ ಬಾರಿಗೆ ಕಣ್ಣು ಮುಚ್ಚುವ ಮೊದಲು

ತನ್ನ ಜೀವನದ ಕಥೆಯನ್ನು ಹೇಳಿ ನರನಾಮಾಂಕಿತವಾದ ಉಂಗುರವನ್ನು ಅರ್ಜುನನಿಗೆ ಕೊಟ್ಟಳು. ಇಂಥ ದುಃಖಸ್ಥಿತಿ ಅರ್ಜುನನ ಜೀವನದಲ್ಲಿ ಎಲ್ಲಿಯೂ ಒದಗಿರಲಿಲ್ಲವೆಂದು ಕಾಣು ತ್ತದೆ. ಅವಳ ಸಮರ್ಪಣೆಯಿಂದ ಅವನ ಹೃದಯದಲ್ಲಿ ಅನು ಕಂಪದ ತರಂಗಗಳೆದ್ದುವು. ಇದರಿಂದ ಅವನ ರಣಗರ್ಬು, ಅಹಂಕಾರ, ಪರರನ್ನು ಚುಚ್ಚುಮನಸ್ಸಿನಿಂದ ಇರಿಯುವುದು— ಇಂಥ ರಾಜಸಗುಣಗಳು ಸಾತ್ತ್ವಿಕಕ್ಕೇರಿರಬೇಕೆಂದು ಕಾಣು ತ್ತದೆ. ಅರ್ಜುನನ ಜೀವನದಲ್ಲಿ ಈ ಘಟನೆಯಿಂದ. ಬರಬಹು ದಾದ ಸಂಸ್ಕಾರವನ್ನು ಕವಿ ಚಿತ್ರಿಸದೆ ನಮ್ಮ ಊಹೆಗೆ ಬಿಟ್ಟು ಧ್ವನಿ ತುಂಬಿದ್ದಾರೆ.



**ಬಭ್ರುವಾಹನ :**

ಚಿತ್ರಾಂಗದೆಯು ಚಂದ್ರಸಮ ತೇಜಸ್ವಿ ಶಿಶುವಾಗಿ ಜನ್ಮವೆತ್ತಿ ದನು ಬಭ್ರುವಾಹನ. ವೀರಮಾತೆಯಾದ ಚಿತ್ರಾಂಗದೆಯೆ ಅವನ ಗುರುವಾದಳು. ಅವನು ಬೆಳೆಯುತ್ತ ಬಂದಂತೆ ತಪಸ್ವಿನಿ ಯಾದ ತಾಯಿಯಿಂದ ರಾಜನೀತಿಯನ್ನೂ ಧರ್ಮವನ್ನೂ ಕಲಿತು

"ಮತ್ತೊರ್ವನರ್ಜುನನೊ ಎನೆ ಬಭ್ರುವಾಹನಂ
ಬಳೆದನಾ ತನ್ನ ನಾಡಿಗೆ ಕೋಂಟೆ ತಾನಾಗಿ,
ನೆರೆಯ ನೆಲಗಳ ಪೊರೆಗೊಡಂಕೆಗೆ ಕೊಡಲಿಯಾಗಿ!"

—ಪು. ೬೮

ಮಹಾವೀರನಾದನು. ತಾಯಿಯ ದಿಗ್ದರ್ಶನದಲ್ಲಿ ದೇಶವನ್ನು ಕಟ್ಟಿ ದುಷ್ಟರನ್ನು ದರ್ಪಮಾತ್ರದಿಂದಲೆ ಅಂಕೆಯಲ್ಲಿಟ್ಟುಕೊಂಡು

ನೆರೆಯ ರಾಜ್ಯದ ದೊರೆಗಳನ್ನು ಮಿತ್ರರನ್ನಾಗಿ ಮಾಡಿಕೊಂಡ ರಾಜ್ಯವನ್ನು ಆಳತೊಡಗಿದನು. ಅವನ ರಾಜ್ಯದಲ್ಲಿ ಸುಖಶಾಂತಿ ನೆಲಸಿತ್ತು.

> "..........................ಮಣಿಪುರಂ
> ಚಿತ್ರರಿಸಿ ಶೋಭಿಸಿತು. ಸೌಂದರ್ಯ ಸ್ವಾತಂತ್ರ್ಯ
> ಸಂಸ್ಕೃತಿಗಳಂ ಮೆರಸಿ ಧೈರ್ಯಶೌರ್ಯಂಗಳಿಂ
> ಶಾಂತಿಯಿಂ ನಲಿದಿತ್ತು ಜನಪದಂ ನಿಚ್ಚಮಾ!"
>
> —ಪು. ೬

ಇಂಥ ರಾಜನನ್ನು ಪಡೆದ ಜನರು ಧನ್ಯರು. ತಾಯಿಯ ಮಾತಿನಲ್ಲಿ ಅವನಿಗೆ ನಂಬಿಕೆಯೂ, ಭಕ್ತಿಯೂ ಇತ್ತು. ಅವನು ಭಾರತದ ಯುದ್ಧವಾಗುವಾಗ ಧರ್ಮದ ಜಯಕೆ ನೆರವಾಗಲು ಕುರುಭೂಮಿಗೆ ಹೋಗಿ ತನ್ನ ಪರಾಕ್ರಮವನ್ನು ತೋರುವ ಅತಿಶಯ ಆಕಾಂಕ್ಷೆ ಇತ್ತು. ಆದರೆ ತಾಯಿ

> "ಕರೆಯದೆಯೆ ತೆರಳುವುದು ನೆಲದೊಡೆಯನಿಗೆ ತಗುವ
> ಮರಿಯಾದೆಯಲ್ಲ"
>
> —ಪು. ೧

ಎಂದು ವಿವೇಕ ಹೇಳಿದಾಗ ಯೌವನ ಸಹಜವಾದ ಸಾಹಸವನ್ನು ಪ್ರದರ್ಶಿಸುವ ಆಸೆಯನ್ನು ಬದಿಗೊತ್ತಿ ತಾಯಿಗೆ ವಿಧೇಯನಾಗಿ ನಡೆದುಕೊಂಡನು. ಎಂದಾದರೊಂದು ದಿನ ಅರ್ಜುನನನ್ನು ಎದುರಿಸಿ ತನ್ನ ಪೌರುಷವನ್ನು ತೋರಬೇಕೆಂಬುದಾಗಿ ಮನಸ್ಸಿನಲ್ಲಿಯೇ ಯೋಚಿಸಿದನು.

ಅರ್ಜುನನ ಯಜ್ಞದ ಕುದುರೆ ಮಣಿಪುರಕ್ಕೆ ಬಂದೊಡನೆ

ತನ್ನ ಪರಾಕ್ರಮವನ್ನು ತೋರುವ ಕಾಲ ಬಂದುದಕ್ಕಾಗಿ ಸಂತೋಷಪಟ್ಟು ಆ ಕುದುರೆಯನ್ನು ಕಟ್ಟಿ ಹಾಕಿಸಿದನು. ಮಣಿಪುರದ ವೈಭವವನ್ನೂ ಬಭ್ರುವಾಹನನ ಪರಾಕ್ರಮವನ್ನೂ ಹಂಸಧ್ವಜನು ಅರ್ಜುನನಿಗೆ ಈ ರೀತಿಯಾಗಿ ಪರಿಚಯ ಮಾಡಿ ಕೊಟ್ಟನು :

"ಏನನೆಂಬೆನು ಪಾರ್ಥ ? ಈ ಹೊಳಲಿನರಸನಿಗೆ
ಸಿದ್ಧಾಯಕರಾಗಿ ನಾವನಿಬರುಂ ತಪ್ಪದೆಯೆ
ಪ್ರತಿ ವರ್ಷಕೊಂದು ಸಾಸಿರ ಬಂಡಿ ಚಿನ್ನವಂ
ತೆತ್ತು ಬಹೆವಲ್ಲದಿರೆ ದಂಡನೆಯೆಂದು ಬೆದರಿ !
ಈತಂಗೆ ಸಚಿವಂ ಸುಬುದ್ಧಿ. ಮೇಣೀತನಾ
ವಾಹಿನಿಯ ವಾರ್ಧಿಯನ್ನೀಸಬಲ್ಲವರಿಲ್ಲ
ಲೋಕದಲಿ. ಪೆಸರಾತನಿಗೆ ಬಭ್ರುವಾಹನಂ !
ಕರುಣೆಯಲಿ ನಯವಿನಯಂಗಳಲಿ ಮೇಣಪಟಿನಲಿ
ಸಂಸ್ಕೃತಿಯ ಸೌಜನ್ಯ ಭಕ್ತಿಯಲಿ ಸೊಬಗಿನಲಿ
ಸರ್ವಸಂಪನ್ನತೆಯೊಳಾತನಿಗೆ ಸಮನಿಲ್ಲ
ತ್ರೈಜಗದೊಳುಂ. ಪುಣ್ಯಪುರುಷನಾತನಿಗೆ ಗುರು
ಆತನ ಜನನಿಯಂತೆ!"

—ಪು. ೭೨

ನೆರೆಯ ರಾಜರಿಂದ ಇಂಥ ಮೆಚ್ಚುಗೆಯನ್ನು ಪಡೆದ ಬಭ್ರುವಾಹನ ಆದರ್ಶವೀರನೆಂಬುದರಲ್ಲಿ ಸಂಶಯವೇ ಬರುವುದಿಲ್ಲ. ಅರ್ಜುನನ ಕುದುರೆಯನ್ನು ಕಟ್ಟಿಸಿ ಅವನೊಡನೆ ಯುದ್ಧ ಮಾಡುವ ಮೊದಲು ತಾಯಿಯ ಆಶೀರ್ವಾದವನ್ನು ಪಡೆಯಲು ಹೋದನು. ಅವನಿಗೆ ತಾಯಿಯಲ್ಲಿ ಅಪಾರ ಭಕ್ತಿ. ತಾಯಿ, ಅರ್ಜುನನು ತನಗೆ ಗುರುವೆಂದೂ ಆದುದರಿಂದ ಮಗನಿಗೂ ಗುರುವೆಂದೂ ಗುರು ಪಿತೃಸಮನೆಂದೂ ಹೇಳಿ ಯಜ್ಞದ ಕುದು

ರೆಯನ್ನು ಬಿಟ್ಟು ಅರ್ಜುನನನ್ನು ಸಕಲ ರಾಜಮರ್ಯಾದೆಗಳಿಂದ ಇದಿರುಗೊಂಡು ಸ್ವಾಗತಿಸಬೇಕೆಂದು ಹಿತವಚನವನ್ನು ಹೇಳಿದಳು. ಈ ಮಾತುಗಳನ್ನು ಕೇಳಿದ ಬಭ್ರುವಾಹನ

“ಕ್ಷತ್ರಿಯರ ಪಂಥದಿಂದಾತನ ತುರಂಗಮಂ
ಕಟ್ಟಿದೆನ್. ನಿಮ್ಮ ಚಿತ್ತಕೆ ಬಾರದಿರ್ದೊಡದು,
ನಿಮ್ಮಡಿಗೆ ಸಂಪ್ರೀತಿಯೆನಿಸದಂ ಬೆಸಸಿದೊಡೆ
ಕೈಕೊಂಬೆನ್”

—ಪು. ೭೬

ಎಂದು ಹೇಳಿ ತಾಯಿಯ ಆಜ್ಞೆಯಂತೆಯೆ ನಡೆದುಕೊಂಡನು. ಈ ಸಮಯದಲ್ಲಿಯಾದರೂ ತಾಯಿ, ಅರ್ಜುನನು ಅವನ ತಂದೆಯೆಂದು ಹೇಳಿದ್ದರೆ ಎಲ್ಲರಿಗೂ ಮಂಗಳವಾಗುತ್ತಿತ್ತು. ಆದರೆ ದೈವೇಚ್ಛೆ ಬೇರೆಯಾಯಿತು.

ತಾಯಿಯ ಆದೇಶದಂತೆ ಅರ್ಜುನನನ್ನು ಸ್ವಾಗತಿಸಲು ಹೋದ ಬಭ್ರುವಾಹನನ ತೇಜೋವಧೆಯಾಯಿತು. ಅದನ್ನು ಸಹಿಸಲು ಅವನಿಗೆ ಸಾಧ್ಯವಾಗಲಿಲ್ಲ. ಆತ್ಮಗೌರವಕ್ಕೆ ಧಕ್ಕೆಯಾದುದನು ಕಂಡು ಆ ದುಃಸ್ಥಿತಿಗೆ ತಂದ ತಾಯಿಯನ್ನು ನೆನೆದು ಮನಸ್ಸಿನಲ್ಲಿಯೆ ಶಪಿಸಿ ಕೋಪದಿಂದ ಬುಸುಗುಟ್ಟುತ್ತ ಅರ್ಜುನನ ಮುಖದ ನೀರಿಳಿಯುವಂತೆ ಗರ್ಜಿಸಿದನು. ಅವನ ಕೋಪವೂ ಮಹತ್ತಾದುದೇ!

“..........................ಎಲೆವೆಲೆವೊ
ನಯರುಚಿ ವಿಹೀನ, ಸಂಸ್ಕೃತಿ ಬಾಹಿರ, ಕಿರಾತ,
ಜಯಮದಾಂಧನೆ, ಪಾರ್ಥ, ಗೌರವವರಿಯೆಲಾ!
ಧರ್ಮಜನ ಧರ್ಮಕಾರ್ಯದೊಳಿರ್ಪೆ ನೀನೆಂದು

ಪೋಽಹ್ ಗುರುವೆಂದೊರೆದ ಜನನಿಯಾಣತಿಯಂತೆ
ಬಂದು ನಾನೆರಗಿದೊಡೆ ನೋರೆ ತಿರುಗಿದೆಯಲಾ
ನೆಣಗೊರ್ಬಿನಿಂ ಸೊಕ್ಕಿ‍ರ್!''

—ಪು. ೭೮

ಬಭ್ರುವಾಹನನ ದೃಷ್ಟಿಯು ಅರ್ಜುನನನ್ನು ಒದೆಯುವಷ್ಟು ತೀಕ್ಷ್ಣವಾಗಿತ್ತು. ಈ ಸಮಯದಲ್ಲಿ ಅವನು "ಫಲ್ಗುಣನ ತಾರುಣ್ಯದ ಪರಾವತಾರ" ವಾಗಿ ಕಾಣುತ್ತಾನೆ. ಅವನ ರೌದ್ರಾಕಾರವನ್ನು ಕಂಡು ಅಲ್ಲಿ ನೆರೆದಿದ್ದ ಅರ್ಜುನನ ಸೈನ್ಯ ಬೆರಗುಗೊಂಡಿತು, ಮತ್ತೆ ಕೆಲವರಿಗೆ ಗೌರವಮಿಶ್ರವಾದ ಭೀತಿ ಹುಟ್ಟಿತು. ಅರ್ಜುನನ ಎದೆಯಲ್ಲಿಯೂ ಅಧೀರತೆಯ ಛಾಯೆ ಸುಳಿಯಿತು. ತಂದೆಯನ್ನು ಮೀರಿಸುವ ಮಗ! ಅರ್ಜುನನಿಗೆ ಇಂಥ ವೀರನು ತನ್ನ ಮಗನೆಂಬೂ ಬಭ್ರುವಾಹನನಿಗೆ ಪಾರ್ಥನೆ ತನ್ನ ತಂದೆಯೆಂದೂ ತಿಳಿದಿದ್ದರೆ ಸಂತಸದ ಸುಗ್ಗಿಯಾಗುತ್ತಿತ್ತು! ತಂದೆ, ಮಗ, ತಾಯಿ—ಇವರೆಲ್ಲರ ಸಮಾಗಮವು ಆನಂದದಾಯಕವಾಗುತ್ತಿತ್ತು? ಇಂಥ ಸಂತಸಕ್ಕೆ ಜಗತ್ತಿನಲ್ಲಿ ಆವಕಾಶವಿಲ್ಲವೊ ಏನೊ!

ಅರ್ಜುನನಿಗೂ ಬಭ್ರುವಾಹನನಿಗೂ ಘೋರಯುದ್ಧ ನಡೆಯಿತು. ಇನ್ನೇನು ಬಭ್ರುವಾಹನನ ಬಾಣಕ್ಕೆ ಅರ್ಜುನನ ತಲೆಯು ಹಾರಿಹೋಗುವ ಸಂದರ್ಭದಲ್ಲಿ ಅರ್ಜುನನ ಪ್ರಾಣವೆಂಬಂತೆ ಚಿತ್ರಾಂಗದೆ ಅಲ್ಲಿಗೆ ಬಂದು ಪತಿಯನ್ನು ಬದುಕಿಸಿ ತಾನು ಪ್ರಾಣಾರ್ಪಣ ಮಾಡಿದಳು. ಆ ಸಮಯದಲ್ಲಿ ಮಹಾವೀರ ಬಭ್ರುವಾಹನನು ಕಿಂಕರ್ತವ್ಯಮೂಢನಾಗಿ ತಾಯಿಯ ಪಾದಗಳನ್ನು ಹಿಡಿದು ರೋಧಿಸಿದನು. ಆ ದುಃಖದಲ್ಲಿ ಅವನಿಗೆ ತಾಯಿಯ ಶುಶ್ರೂಷೆ ಮಾಡಬೇಕೆಂಬುದೂ ತಿಳಿಯಲಿಲ್ಲ. ಅವನ

ಕ್ಷಾತ್ರಗುರುವಾಗಿ ಧರ್ಮಗುರುವಾಗಿ ಪ್ರೇಮದಿಂದ ಸಲಹಿದ ತಪಸ್ವಿನಿ ತಾಯಿ ಚಿತ್ರಾಂಗದೆ ತನ್ನ ಪಾಲಿಗೆ ಇನ್ನಿಲ್ಲ. ದೈವವೇಕೆ ಇಂಥ ದಾರುಣವಾದ ದುಃಖವನ್ನು ಬಭ್ರುವಾಹನನಿಗೆ ತಂದೊಡ್ಡಿತೋ ಎಂದು ಅವನೊಡನೆ ಎಲ್ಲರೂ ಮಮ್ಮಲ ಮರುಗುವಂತಾಗುತ್ತದೆ. ಪಾವನಮೂರ್ತಿಯಾದ ತಾಯಿಯ ಅನುಗ್ರಹದಮೇಲೆ ಅವನಿಗೆ ತಿಳಿಯುತ್ತದೆ ಅರ್ಜುನ ತನ್ನ ತಂದೆಯೆಂದು. ಒಂದು ಕಡೆ ಮಹಾದುಃಖ. ಮತ್ತೊಂದುಕಡೆ ಸಂತೋಷದ ಉದಯ! ಯಾವ ಪುಣ್ಯದಿಂದಲೊ ಚಿತ್ರಾಂಗದೆಯಂಥ ಪತ್ನಿಯನ್ನೂ ಬಭ್ರುವಾಹನನಂಥ ಮಗನನ್ನೂ ಪಡೆದ ಅರ್ಜುನ. ಆದರೆ ಆ ಸಾಧ್ವಿಯನ್ನು ಉಳಿಸಿಕೊಳ್ಳುವ ಭಾಗ್ಯವಂತನಾಗಲಿಲ್ಲ. ಬಭ್ರುವಾಹನನನ್ನು ಉಳಿಸಿಕೊಂಡುದಕ್ಕೆ ಅವನ ಸುಕೃತ. ತಂದೆಯನ್ನು ಎಲ್ಲ ರೀತಿಯಿಂದಲೂ ಮೀರಿಸುವ ಬಭ್ರುವಾಹನ ತಾಯಿಯನ್ನು ಉಳಿಸಿಕೊಂಡಿದ್ದರೆ ಧನ್ಯನಾಗುತ್ತಿದ್ದನು

## ೪ ಕಾವ್ಯವಿಮರ್ಶೆ

ಮಹಾಭಾರತದಲ್ಲಿ ಚಿತ್ರಾಂಗದೆ ಮಿಂಚಿನಂತೆ ಸುಳಿದು ಮಾಯವಾಗುವ ಪಾತ್ರ. ಆ ಮಹಾಕಾವ್ಯದಲ್ಲಿ ಚಿತ್ರಾಂಗದೆಯನ್ನು ಉಜ್ವಲವಾಗಿ ಚಿತ್ರಿಸಲು ವ್ಯಾಸರಿಗೆ ಬಿಡುವಿಲ್ಲ. ವ್ಯಾಸರ ಪ್ರತಿಭೆಯ ಬೆಳಕಿನಲ್ಲಿ ಮೂಡಿದ ಈ ಉತ್ತಮ ಕಥಾವಸ್ತುವನ್ನು ಲಕ್ಷಿಸಿ ರವೀಂದ್ರನಾಥ ಠಾಕೂರರು ತಮ್ಮ ಪ್ರತಿಭೆಯಲ್ಲಿ ಪೋಷಿಸಿ ಉತ್ತಮ ಚಿತ್ರವನ್ನು ಕೊಟ್ಟಿದ್ದಾರೆ. ಚಿತ್ರಾಂಗದೆಯ ಪೂರ್ಣಚಿತ್ರವನ್ನು ಸೃಷ್ಟಿಸಿ ಉತ್ತಮ ಕಾವ್ಯವನ್ನು

ನೀಡಿರುವವರು ಶ್ರೀ ಕುವೆಂಪು. ಈ ಕಾವ್ಯವನ್ನು ಆರಂಭಿಸಿದಾಗ ಮಹಾಕಾವ್ಯವನ್ನಾಗಿ ಸೃಜಿಸಬೇಕೆಂಬ ಬಯಕೆ ಅವರಿಗಿದ್ದಂತೆ ಕಾಣುತ್ತದೆ. ಆದರೆ ಮಹಾಕಾವ್ಯಕ್ಕೆ ಬೇಕಾದ ಮಹತ್ತಿದ್ದರೂ ಬೃಹತ್ತಿಲ್ಲದೆ ಮಹಾಕಾವ್ಯದ ಶ್ರೇಣಿಗೆ ಸೇರದಿದ್ದರೂ ಉತ್ತಮ ರಸವತ್ ಕಾವ್ಯವಾಗಿದೆ.

**ಪಾತ್ರ ರಚನಾ ಕೌಶಲ:** ಕೃತಿಗೆ ಸಾಮಾನ್ಯವಾಗಿ ಅಲ್ಲಿ ಬರುವ ಮುಖ್ಯ ಪಾತ್ರವನ್ನೊ ಘಟನೆಯನ್ನೊ ತತ್ತ್ವವನ್ನೊ ಗಮನಿಸಿ ಹೆಸರನ್ನಿಡುವುದು ವಾಡಿಕೆಯಾಗಿದೆ. ಈ ಕೃತಿಯ ಪ್ರಮುಖ ಪಾತ್ರವಾದ ಚಿತ್ರಾಂಗದೆಯ ಹೆಸರನ್ನು ಕಾವ್ಯಕ್ಕೂ ಇಟ್ಟಿರುವುದು ಸರ್ವಾಂಗಸುಂದರವಾಗಿದೆ.

ಪಾತ್ರಸೃಷ್ಟಿಯಲ್ಲಿ ಶ್ರೀ ಕುವೆಂಪು ಅವರು ತೋರಿರುವ ಕೌಶಲವನ್ನು ಚಿತ್ರಾಂಗದೆಯ ಪಾತ್ರವನ್ನು ಮಾತ್ರ ದೃಷ್ಟಿಯಲ್ಲಿಟ್ಟು ಕೊಂಡು ಇಲ್ಲಿ ವಿಚಾರಮಾಡಿದೆ. ಚಿತ್ರಾಂಗದೆ ಚಿತ್ರವಾಹನನ ಏಕಮಾತ್ರ ಪುತ್ರಿ. ಗಂಡಿನಂತೆ ಬೆಳೆದಳು. ಅವಳು ಯುವತಿಯಾದಾಗ ಅವಳ ಗಂಡುಡುಗೆಯನ್ನು ದಾಟಿ ಆಕೆಯ ಹೆಣ್ಣು ಹೃದಯವನ್ನು ಮನ್ಮಥನು ಎಚ್ಚರಿಸಿದನು. ಆ ಎಚ್ಚರಿಕೆಯೆ ಅವಳ ಕನಸು. ಮನಶ್ಶಾಸ್ತ್ರ ದೃಷ್ಟಿಯಿಂದಲೂ ಈ ಚಿತ್ರಣ ಅತ್ಯುತ್ತಮವಾಗಿದೆ. ರವೀಂದ್ರನಾಥ ಠಾಕೂರರ 'ಚಿತ್ರಾ' ಗೀತ ನಾಟಕದಲ್ಲಿ ಈ ಕನಸಿನ ಚಿತ್ರಣವಿಲ್ಲ. ರವೀಂದ್ರರು ಮದನ ವಸಂತರನ್ನು ನಾಟಕದಲ್ಲಿ ಪ್ರವೇಶಿಸುವಂತೆ ಮಾಡಿ ಅವರಿಂದ ಚಿತ್ರಾಂಗದೆಗೆ ವರವನ್ನು ಕೊಡಿಸುತ್ತಾರೆ. ಶ್ರೀ ಕುವೆಂಪು ತಮ್ಮ ಕಾವ್ಯದಲ್ಲಿ ಸ್ವಪ್ನವೊ ದರ್ಶನವೊ ಸ್ವಪ್ನದರ್ಶನವೊ ಎಂಬ ಸ್ಥಿತಿಯಲ್ಲಿ ಕಾಣಿಸುವಂತೆ ಮಾಡಿ, ಮದನನು ನೀಡುವ ವರವು,

ಅವಳ ಪ್ರಣಯೋದ್ವೇಗದಿಂದ ಅವಳ ಹೃದಯದಿಂದಲೆ ಗೋಚ
ರಿಸುವ ಪ್ರತಿಮೆಗಳೆಂಬಂತೆ ಧ್ವನಿಪೂರ್ಣವಾಗಿ ಚಿತ್ರಿಸಿದ್ದಾರೆ
ಯೌವನದಿಂದ ತುಂಬಿದ ರಾಜಕುಮಾರಿಗೆ ಮನ್ಮಥಾವಸ್ಥೆ
ಮದನ ರೂಪದಲ್ಲಿ ಶಿಕ್ಷಣವಿತ್ತಿತೆಂಬುದು ಕಾವ್ಯದಲ್ಲಿ ಸಾಂಕೇ
ಕವಾಗಿ ಪ್ರಕಟವಾಗಿದೆ.

ರವೀಂದ್ರರ ಕೃತಿಯಲ್ಲಿ ಚಿತ್ರಾ ಒಂದು ವರ್ಷಕಾಲ ಅರ್ಜು
ನೊಡನಿದ್ದು ಗರ್ಭವತಿಯಾಗುತ್ತಾಳೆ. ಒಂದು ವರ್ಷ ಕಾ
ಅವಳು ಅರಮನೆಯಿಂದ ದೂರವಿದ್ದರೆ ಯಾರೂ ಅವಳನ
ಅರಸುವುದಿಲ್ಲವೆ? ಎಂಬ ಸಂಶಯ ಬರುತ್ತದೆ. ಯೌವನ ಸಹ
ವಾದ ಪ್ರಣಯದ ಉನ್ಮತ್ತತೆಯಲ್ಲಿ ಅರ್ಜುನನು ತನ್ನ ಕರ್ತ
ವನ್ನು ಮರೆತು ಒಂದು ವರ್ಷಕಾಲ ಚಿತ್ರಾಳೊಡನೆ ಇರುವುದ
ಸಾಧ್ಯವಿಲ್ಲವೆಂದು ಕಾಣುತ್ತದೆ. ಶ್ರೀ ಕುವೆಂಪು ಅವರು ಈ ಕಾ
ವನ್ನು ಒಂದು ತಿಂಗಳಿಗೆ ಇಳಿಸಿದ್ದಾರೆ. ಈ ಬದಲಾವಣೆ
ಸಂದರ್ಭದಲ್ಲಿ ಹೆಚ್ಚು ಸೂಕ್ತವಾಗಿದೆ. ರವೀಂದ್ರರು ತಮ
ಕೃತಿಯ ಕೊನೆಯಲ್ಲಿ ಅರ್ಜುನನಿಂದ "ಪ್ರಿಯೆ, ಪೂರ್ಣ
ವಾಯ್ತೆನ್ನ ಜೀವನಂ" ಎಂದು ಹೇಳಿಸಿ ಕಾವ್ಯವನ್ನು ಮುಕ್ತಾಯ
ಗೊಳಿಸಿದ್ದಾರೆ. ಈ ಮಂಗಳವನ್ನು ಹಾಡಿ ಠಾಕೂರರು "ತಾರು
ಣ್ಯದ ಸಂಯಮರಹಿತ ವ್ರತಭ್ರಷ್ಟತೆಗೆ ಪ್ರಾಯಶ್ಚಿತ್ತ ವಿಧೀ
ವಾದ ಭೋಗ ಕಿರೀಟವಿಟ್ಟು ಪ್ರೇಮದ ಮಂಗಳಾರತಿ" ಎತ್ತಿರ
ವುದು ಜೀವನದ ಪರಮ ಸತ್ಯಕ್ಕೆ ಚ್ಯುತಿ ಬಂದಂತಾಗುತ್ತ
ಒಂದು ಕಡೆ ಅರ್ಜುನನ ವ್ರತಭಂಗ, ಮತ್ತೊಂದು ಕಡೆ ತಂ
ತಾಯಿಗಳ ಅಪ್ಪಣೆ ಪಡೆಯದೆ ಅರ್ಜುನನನ್ನು ಮೋಹಿಸಿ
ಚಿತ್ರಾಂಗದೆಯ ಸ್ವಚ್ಛಂದತೆ— ಇವೆರಡೂ ಜೀವನದಲ್ಲಾಗ
ಸಮಾಜದಲ್ಲಾಗಲಿ ಗೌರವ ಪಡೆವ ವರ್ತನೆಯಲ್ಲ.

ಚಿತ್ರಾಂಗದೆ ಅರ್ಜುನರಲ್ಲಿ ಯಾರದು ಹೆಚ್ಚಿನ ತಪ್ಪು? ಚಿತ್ರಾಂಗದೆಗಿಂತ ಅರ್ಜುನನೆ ವಯಸ್ಸಿನಲ್ಲಿ ಅನುಭವದಲ್ಲಿ ಹಿರಿಯವನು. ದ್ರೌಪದಿಯನ್ನು ಮದುವೆಯಾಗಿ ಸ್ತ್ರೀಜೀವನದ ಸುಖ ಕಷ್ಟಗಳನ್ನು ಅರಿತವನು. ಈ ದೃಷ್ಟಿಯಿಂದ ಸಮೀಕ್ಷಿಸಿದಾಗ ಅರ್ಜುನನದೆ ಹೆಚ್ಚಿನ ವ್ರತಭಂಗ. ಹೀಗಿರುವಾಗ ಶ್ರೀ ಕುವೆಂಪು ತಪಸ್ವಿನಿಯಾದ ಚಿತ್ರಾಂಗದೆಯನ್ನು ಏಕೆ ಕಾವ್ಯದಲ್ಲಿ ಬಲಿಕೊಟ್ಟಿದ್ದಾರೆ? ಎಂಬ ಪ್ರಶ್ನೆ ಬರುತ್ತದೆ. ತಪಸ್ವಿನಿಯಾದ ಚಿತ್ರಾಂಗದೆಗೆ ಪತಿಸುತರ ಹಿತಚಿಂತನೆಯ ಮುಂದೆ ಅವಳ ಜೀವನ ಅಲ್ಪವಾಗಿ ಕಾಣುತ್ತದೆ. ಅವಳ ತಪಸ್ಸು ಅವಳ ಪತಿಯಾದ ಅರ್ಜುನನ ವ್ರತಭಂಗದಿಂದಾದ ಪಾಪವನ್ನು ತೊಡೆದುಹಾಕುತ್ತದೆ. ಅವಳ ದೃಷ್ಟಿಯಲ್ಲಿ ಸಾವು ದುಃಖಕರವಲ್ಲ. ಪ್ರಾಣಾರ್ಪಣ ಮಾಡುವಾಗಲೂ "ದುಗುಡವೇಕೆಲೆ ಮಗನೆ? ಸಂತಸಕೆ ಸಮಯವಿದು! ನಾನಳಿವೆನಾದರೇಂ? ಮಂಗಳ ಮುಹೂರ್ತಕ್ಕೆ ನಾನಿಲ್ಲಿಗೈತಂದೆನ್" ಎನ್ನುವ ದೃಷ್ಟಿ ಅವಳದು. ಕವಿ, ಸಮರ್ಪಣೆಯ ಚಿತ್ರವನ್ನು ತಂದು ಭವ್ಯತೆಯ ದರ್ಶನ ಮಾಡಿಸಿದ್ದಾರೆ. ಚಿತ್ರಾಂಗದೆಯ ಪಾತ್ರಚಿತ್ರಣದಲ್ಲಿ ಕವಿ ತೋರಿರುವ ಕೌಶಲವನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ವಿವರಿಸಿ ತೋರಿಸಲು ಪ್ರಯತ್ನಿಸಿದ್ದಾಯಿತು. ಕವಿಪ್ರತಿಭೆ ಹೇಗೆ ಜೀವನದ ಸೂಕ್ಷ್ಮ ವಿಚಾರಗಳನ್ನೂ ಗ್ರಹಿಸಬಲ್ಲುದೆಂಬುದನ್ನು ಪಾತ್ರಚಿತ್ರಣ ಕೌಶಲದಲ್ಲಿ ಕಾಣಬಹುದು. ಅರ್ಜುನನು ಕಳದಲ್ಲಿ ಬಭ್ರುವಾಹನನಿಂದ ಹತನಾಗಿ ಸಂಜೀವಮಣಿಯಿಂದ ಪುನಃ ಬದುಕುವಂತೆ ಚಿತ್ರಿಸಿ ಜೈಮಿನಿ ಲಕ್ಷ್ಮೀಶರು ಅತಿಮಾನುಷತೆಯನ್ನು ಪ್ರಕಟಿಸಿದ್ದಾರೆ. ಚಿತ್ರಾಂಗದೆಯ ಆತ್ಮಾರ್ಪಣದಿಂದ ಅರ್ಜುನ ಬಭ್ರುವಾಹನರು ಬದುಕುಳಿವಂತೆ ಚಿತ್ರಿಸಿ, ತ್ಯಾಗದ ಮಹಾಚಿತ್ರವನ್ನು ನಮ್ಮ ಮುಂದಿಡುತ್ತಾರೆ ಶ್ರೀ ಕುವೆಂಪು.

ಈ ಕಾವ್ಯದಲ್ಲಿ ಶೃಂಗಾರ ವೀರರಸಗಳು ತುಂಬಿಬಂದರೂ ಆ
ಗಳಿಗೆ ಕಿರೀಟಪ್ರಾಯವಾಗಿ ಶಾಂತರಸವು ಕೊನೆಗೆ ಸ್ಥಾಯಿಯಾ
ನಿಲ್ಲುತ್ತದೆ. ರಸಗಳಲ್ಲಿ ಶಾಂತವೆ ಅತ್ಯುತ್ತಮವಾದುದು. ಅ
ರಿಂದ ಭಾವಗಳ ಸಂಸ್ಕಾರವೂ ಪರಿಷ್ಕಾರವೂ ಆಗುತ್ತದೆ
ಚಿತ್ರಾಂಗದೆಯ ಪಾತ್ರವನ್ನು ಕಾವ್ಯದೃಷ್ಟಿ, ಮನಶ್ಶಾಸ್ತ್ರದೃಷ್ಟಿ
ತತ್ತ್ವದೃಷ್ಟಿಗಳಿಂದ ಸಮೀಕ್ಷಿಸಿದಾಗ ಆದರ್ಶವಾದ ಪಾತ್ರವನ್ನು
ಕವಿಪ್ರತಿಭೆ ಸೃಜಿಸಿರುವುದು ಗೋಚರವಾಗುತ್ತದೆ.

**ವರ್ಣನೆಗಳು:** ಕವಿಗೆ ಪ್ರಕೃತಿ ಸೌಂದರ್ಯವನ್ನಾಗಲಿ ಅಂ
ರಂಗದ ಒಳತೋಟಿಯನ್ನಾಗಲಿ, ವೀರವನ್ನಾಗಲಿ ಮಾನ
ಸ್ವಭಾವವನ್ನಾಗಲಿ ಚಿತ್ರಿಸುವ ಅಸಾಧಾರಣ ಪ್ರತಿಭೆ ಇದೆ
ಇವುಗಳಲ್ಲಿ ಕವಿಗೆ ಅತ್ಯಂತ ಪ್ರಿಯವಾದುದು ಪ್ರಕೃತಿ ಸೌಂ
ಯರ್ದ ವರ್ಣನೆ ಎಂದರೆ ಅತಿಶಯೋಕ್ತಿಯಾಗಲಾರದು
ಪ್ರಭಾತಕಾಲದಲ್ಲಿ ದುಂಬಿಗಳೂ ಜೇನು ಹುಳುಗಳೂ ಸಂತೋಷ
ದಿಂದ ವಿಹರಿಸುವುದನ್ನು ಹೀಗೆ ವರ್ಣಿಸಿದ್ದಾರೆ:

> "..................................ಕೆದರಿ
> ದಳಗಳಂ ಕುಸುಮತತಿ ನಲಿಯೆ ನಸುಗಂಪಿನಿಂ,
> ಮತ್ತೆ ಮಧುಪಂಗಳುಂ ಮತ್ತೆ ಭ್ರಮರಂಗಳುಂ
> ಹಿಂಡುಹಿಂಡಾಗಿ ಹೂವೊಡಲ ಹೊಂದೂಳಿಯೊಳ್
> ಹೊರಳಿ, ಹೊಂಬೊಗರೇರಿ, ಮಲರು ಮಲರಿಗೆ ಹಾರಿ
> ಮಕರಂದ ಭಿಕ್ಷೆಯಂ ಬೇಡಿ, ಕುಟಜಂಗಳಲಿ
> ಝೇಂಕರಿಸಿದುವು ನಿತ್ಯಯಾತ್ರೆಯೋಂಕಾರಮಂ!"

—ಪು.

ಪ್ರಾತಃಕಾಲದಲ್ಲಿ ನಡೆಯುವ ಮಧುಪಗಳ ವ್ಯಾಪಾರವನ್ನು

ಕಣ್ಣಿನ ಮುಂದೆ ನಿಲ್ಲುವಂತೆ ಚಿತ್ರಿಸಿರುವುದು ಮನೋಜ್ಞವಾಗಿದೆ.

ಮದನನ ವರದಿಂದ ಸಂತಸಗೊಂಡು ಸ್ವಪ್ನದಿಂದ ಕಣ್ಣು ತೆರೆದ ಚಿತ್ರಾಂಗದೆಗೆ ಹೊರಗಡೆಯ ಪ್ರಕೃತಿ ಹೀಗೆ ಕಾಣಿಸಿತು:

"ಸ್ವಪ್ನ ಮಧುರಾನುಭವದಾನಂದದಿಂದುಬ್ಬಿ
ನೋಡಿದಳು ಹೊರಗೆ: ಹಬ್ಬಿತ್ತು ಸ್ವಾಪ್ನಿಕ ವಿಪಿನ
ಚಂದ್ರಿಕಾ ಸಾಂದ್ರಮಾಯೆ! ಹಾಡುತಿರ್ದುದು ತೇನೆ!"

—ಪು. ೩೦

ತಟಸ್ಥವಾಗಿರುವಂತೆ, ಕಾಣುವ ಪ್ರಕೃತಿ, ಮಾನವ ಪ್ರಕೃತಿಯನ್ನೂ ಚಿತ್ರಿಸುತ್ತದೆ ಎಂಬುದಕ್ಕೆ ಅನೇಕ ನಿದರ್ಶನಗಳು ಕಾವ್ಯದಲ್ಲಿ ಅಲ್ಲಲ್ಲಿ ಸಿಗುತ್ತವೆ. ಇಂಥ ವರ್ಣನೆಗಳಲ್ಲಿ ಧ್ವನಿ ತುಂಬುತ್ತಾರೆ ಕವಿ.

ಹೆಣ್ಣಿನ ಮೋಹಕ್ಕೆ ಸಿಕ್ಕಿದ ಅರ್ಜುನನು ಚಿತ್ರಾಂಗದೆಗೆ ಶರಣುಹೋಗುವ ಸನ್ನಿವೇಶದಲ್ಲಿ ಅವನ ಭಾವತೀವ್ರತೆಯನ್ನು ಕವಿ ಹೀಗೆ ವರ್ಣಿಸಿದ್ದಾರೆ:

"ನನ್ನ ಜೀವನ ಪರಮಪುರುಷಾರ್ಥ ರೂಪಿಣಿಯೆ,
ಭುವನೈಕ ಮೋಹಿನಿಯೆ, ನೀನೆನ್ನ ಸಂಪದಕೆ
ಲಕ್ಷ್ಮಿ; ವಿದ್ಯೆಗೆ ವಾಣಿ; ಪರಮ ಸೌಂದರಕೆ ರತಿ;
ಸರ್ವಾಭಿಲಾಷೆಗಳಿಗಾಕಾಂಕ್ಷೆಗಳಿಗೆಲ್ಲ
ಚರಮಗತಿ! ನೀನೆ ಶಾಶ್ವತ ಸತ್ಯ; ಪ್ರಾಣೇಶ್ವರಿ,
ನಿನ್ನನುಳಿದೆಲ್ಲವೂ ಶೂನ್ಯ ಶೂನ್ಯಂ, ಪೂರ್ಣೆ!
ನೀನಮೃತವೆನಗೆ; ನೀನಲ್ಲದಮೃತನೆ ಮೃತ್ಯು! !"

—ಪು ೪೦

ಮನ್ಮಥ ಬಾಧೆಯಿಂದ ಬಂಧಿಸಲ್ಪಟ್ಟಾಗ ಮನುಷ್ಯನ ಪರಿಸ್ಥಿತಿ ಹೇಗಾಗುವುದೆಂಬುದನ್ನು ಇಲ್ಲಿ ಚಿತ್ರಿಸಿರುವ ರೀತಿ ಮಾನವ ಹೃದಯದ ಸೂಕ್ಷ್ಮ ಪರಿಚಯವನ್ನು ಮಾಡಿಕೊಡುತ್ತದೆ.

ಬಭ್ರುವಾಹನನು ಕಳಶ ಕನ್ನಡಿ ಹಿಡಿದ ಕನ್ನೆಯರೊಡನೆ ಅರ್ಜುನನನ್ನು ಎದುರುಗೊಳ್ಳಲು ಬರುತ್ತಿರಲು ಅರ್ಜುನನ ಸೈನ್ಯದ ಜವ್ವನಿಗರು ಮನಸ್ಸಿಗೆ ಬಂದಂತೆ ಲಘುವಾಗಿ ಹರಟುತ್ತಾರೆ.

"......'ನಿನಗೊಸಗೆ'! 'ತನಗೊಸಗೆ!' 'ಪೆಣ್ ಚೆಲ್ವು!'
'ಸವಿಗೆಲ್ವು!' ಎಂದು ಜವ್ವನಿಗ ಸೈನಿಕರೆಲ್ಲ
ತಮತಮಗೆ ನುಡಿದರ್ ಕುಚೋದ್ಯಚೋದ್ಯಂಗಳು!"

—ಪುಟ ೭೭

ಅತ್ಯಂತ ಸಾಮಾನ್ಯ ಮನಸ್ಸಿನ ರೀತಿ ನೀತಿಗಳನ್ನು ಕವಿ ಪ್ರತಿಭೆ ಅರಿಯಬಲ್ಲುದೆಂಬುದಕ್ಕೆ ಇದೊಂದು ನಿದರ್ಶನ. ಪ್ರಕೃತಿಯ ವ್ಯಾಪಾರವನ್ನಾಗಲಿ ಮಾನವ ಹೃದಯದ ಭಾವಗಳನ್ನಾಗಲಿ ವರ್ಣಿಸುವುದರಲ್ಲಿ ಕವಿ ತಮ್ಮ ಪ್ರತಿಭಾಶಕ್ತಿಯ ಹಿರಿಮೆಯನ್ನು ತೋರಿದ್ದಾರೆ. ಇಂಥ ವರ್ಣನೆಗಳನ್ನು ಕಾವ್ಯದಲ್ಲಿ ಕಾಣಬಹುದು.

**ಶೈಲಿ:** ಕವಿಯ ದರ್ಶನದಿಂದ ಮೈದೂಡಿ ನಿಲ್ಲುತ್ತದೆ ಶೈಲಿ. ಈ ಕಾವ್ಯದಲ್ಲಿ ಸರಳ ಶೈಲಿಯನ್ನಾಗಲಿ ಸಂಸ್ಕೃತ ಭೂಯಿಷ್ಠವಾದ ಶೈಲಿಯನ್ನಾಗಲಿ ಕಾಣಬಹುದು. ಆಯಾ ಸನ್ನಿವೇಶಗಳಿಗೆ ಬೇಕಾದಂತೆ ರೀತಿ ವ್ಯತ್ಯಾಸಗಳಿರುವುದನ್ನು ಕಾಣುತ್ತೇವೆ.

"ಮಲೆಯ ಹೂದೋಂಟದಲಿ ತಂಬೆಲರ ತೀಟಕ್ಕೆ
ತಲೆದೂಗಿ ನಲಿದು ತೆರೆತೆರೆಯಾಗಿ ನಗೆಬೀರಿ
ನೆರೆದಿರಲ್ ಬಣ್ಣಬಣ್ಣದ ಕುಸುಮ ಪರಿಷತ್ತು,
ರೆಕ್ಕೆ ಬಂದಿಹ ಹೂವಿನಂತೆ ಬಣ್ಣದ ಚಿಟ್ಟೆ
ಪುಷ್ಪದಿಂ ಪುಷ್ಪಕ್ಕೆ ಹಾರಿ ಬಂಡನು ಹೀರಿ
ಕಂಗೊಳಿಸುತಿರೆ ಕಂಡು ಬಾಲೆಯೋರ್ವಳ್ ಸೋತು,
ತುಡುಕಲದನೆಳಸುವಳ್"

—ಪುಟ ೪

ಇಂಥ ಸರಳ ಶೈಲಿಯಲ್ಲಿ ಓಡುವ ಕಾವ್ಯ ವಿರಳವಾಗಿ ಸಂಸ್ಕೃತ ಭೂಯಿಷ್ಠವಾದ ಶೈಲಿಯಲ್ಲಿಯೂ ಭೋರ್ಗರೆವುದನ್ನೂ ಕಾಣುತ್ತೇವೆ.

"ಮೇಘಾದ್ರಿ ಮುದ್ರಿತ ಸುನೀಲ ಜಲ ಕಲ್ಲೋಲ
ಸಮ್ಮಥನ ಸಂಜಾತ ಮೌಕ್ತಿಕಾಫೇನಮಯ
ತಾಂಡವ ತರಂಗಾಟ್ಟಹಾಸ ಸಂಭ್ರಮ ಮತ್ತ
ಕಾಸಾರಮೆಸೆದತ್ತನಂತ ನಿಸ್ತಾರ ಭವ್ಯಂ!"

—ಪು. ೫

ಸರೋವರದ ಅಟ್ಟಹಾಸವು ಯೌವನದ ಭಾವೋದ್ರೇಕ ಉಬ್ಬರವಿಳಿತಗಳನ್ನು ಪ್ರತಿಬಿಂಬಿಸುತ್ತದೆ. ಶೈಲಿಯಲ್ಲಿಯೂ ಈ ಸ್ಪಂದನವನ್ನು ಕಾಣುತ್ತೇವೆ.

ಕಾವ್ಯದತ ಉಪಮಾ ರೂಪಕ ಅಲಂಕಾರಗಳಿಂದ ಶೈಲಿಗೆ ಹೊಸ ಸೊಬಗು ಬಂದಿದೆ. ಮದನನಿಂದ ವರವನ್ನು ಪಡೆದ ಮೇಲೆ " ಬತ್ತಿದ ಸರೋವರಕ್ಕೆ ಹೊಸ ನೀರು ಬರುವಂತೆ " ಹೊಸ ಆಸೆ ಚಿತ್ರಾಂಗದೆಯ ಹೃದಯದಲ್ಲಿ ಮೂಡಿತು.

"ಕರಿಯ ಮುಗಿಲ್ಗಬ್ಬದಿಂದೊಗೆವ ಮಿರಿಮಿಂಚೆನೆಲ್" ಕನಸಿನ ಜಂಕೆ ಮರಿ ಓಡಿತು. ಇಂಥ ಅನೇಕ ಉಪಮಾನಗಳು ಅರ್ಥ ಗರ್ಭಿತವಾಗಿ ಭಾವಪೂರ್ಣವಾಗಿ ಮೂಡಿವೆ. ಪಾಶ್ಚಾತ್ಯ ಮಹಾ ಕಾವ್ಯಗಳಲ್ಲಿ ಕಾಣುವ ಮಹೋಪಮೆಗಳನ್ನು ಈ ಕಾವ್ಯದಲ್ಲಿ ಯಶಸ್ವಿಯಾಗಿ ಪ್ರಯೋಗಿಸಿರುವುದನ್ನು ಕಾಣುತ್ತೇವೆ. ಈ ಕಾವ್ಯದಲ್ಲಿ ಏಳು ಮಹೋಪಮೆಗಳು ಬಂದಿವೆ. ಒಂದೊಂದೂ ಸ್ವತಂತ್ರವಾಗಿ ನಿಲ್ಲುವ ಉತ್ತಮ ಚಿತ್ರ. ಮಹೋಪಮೆಗಳು ಭಾವಕೋಶವನ್ನು ವಿಸ್ತರಿಸಿ ರಸಾನುಭೂತಿಗೆ ಎರಸುತ್ತವೆ. ಮೇಘರತಿ, ಪ್ರಭಾತಕಾವ್ಯ, ಗಾನ ವೈತರಣಿ ಇಂಥ ಅನೇಕ ಸುಂದರ ರೂಪಕಗಳನ್ನು ಕಾವ್ಯದಲ್ಲಿ ಕಾಣುತ್ತೇವೆ. ಇವುಗಳಲ್ಲದೆ 'ಕಲ್ಪನೆಯ ಚೆಂಡು', 'ಕ್ರಕಚಿತ ದಿಗಂತರೇಖೆ' ಇಂಥ ಹೊಸ ಪದಗಳನ್ನು ಸೃಷ್ಟಿಸುವ ಶಬ್ದ ಶಿಲ್ಪವನ್ನೂ ಕಾಣುತ್ತೇವೆ.

ಈ ಕಾವ್ಯದ ಛಂದಸ್ಸಿನ ಮೂಲ ಓಟ ಸರಳರಗಳೆಯದು. ಪ್ರಧಾನವಾಗಿ ಐದು ಮಾತ್ರೆಯ ನಾಲ್ಕು ಗಣಗಳ ನಡಿಗೆ. ಆದರೆ ಐದೈದು ಮಾತ್ರೆಗಳು ಕಾವ್ಯದ ಉದ್ದಕ್ಕೂ ಬಂದರೆ ಬೇಸರವಾಗದೆ ಇರದು. ಇದನ್ನು ಅರಿತ ಕವಿ, ಕಾವ್ಯದ ನಡಿಗೆ ಯಲ್ಲಿ ಷಟ್ಪದಿ, ಅನುಷ್ಟುಭ್, ತ್ರಿಪದಿ ಇತ್ಯಾದಿ ಛಂದಸ್ಸುಗಳ ಲಯವನ್ನು ಅಲ್ಲಲ್ಲಿ ತಂದು ಛಂದಸ್ಸಿನಲ್ಲಿ ಹೊಸ ಶಕ್ತಿಯನ್ನೂ ಸೌಂದರ್ಯವನ್ನೂ ತೋರಿದ್ದಾರೆ.

> "ಇರುಳು ಕಳಿದುದು. ಉದಯ ಚೂಡದಲಿ ಮೂಡಿದಳು
> ಉಷೆ ನೋಡೆ ಮೂಡಣದ್ರಿಯ ಕೋಡುಗಲ್ಲಿನೆಡೆ
>
> —ಪು. ೫೦

ಇಲ್ಲಿ ಐದು ಮಾತ್ರೆಯ ಗಣಗಳೆ ಮೂಲವಾದರೂ ಗಣಗಳನ್ನು

ವಿಭಜಿಸುವಾಗ ಇರುಳು ಕಳೆ | ದುದು. ಉದಯ|ಎಂದು ವಿಂಗಡಿಸಲಾಗುವುದಿಲ್ಲ. ಇಲ್ಲಿ ೩, ೪, ೩ ಮಾತ್ರೆಯ ಗಣಗಳನ್ನಾಗಿ ವಿಂಗಡಿಸಬೇಕು.

ಇರುಳು । ಕಳೆದುದು । ಉದಯ । ಚೂಡದಲಿ। ಮೂಡಿದಳು।

ಪಾದದ ಪೂರ್ವಾರ್ಧದಲ್ಲಿ ಐದು ಮಾತ್ರೆಯ ಎರಡು ಗಣಗಳಿಗೆ ಬದಲಾಗಿ ೩, ೪, ೩ ಮಾತ್ರೆಯ ಗಣಗಳು ಬಂದು ಹೊಸ ಸೊಬಗು ಬಂದಿದೆ.

"..........................ಮೆರೆದತ್ತು
ಚೈತ್ರೋದಯದ ವಿಪುಲ । ಸಂಪತ್ತು ಆದೊಡೇನಾ ।
ಕನ್ಯೆಯಾತ್ಮವದಿತ್ತನಂತ ದಾರಿದ್ರ್ಯದೋಲ್!"

—ಶ್ರೀ. ೧೫

ಆದೊಡೇನಾ ಎಂಬ ಪಾದದ ಕೊನೆಯಲ್ಲಿ ದೀರ್ಘ ಬಂದಿದೆ. "ಆದೊಡೇನ್" ಎಂದಿದ್ದರೆ ಐದು ಮಾತ್ರೆಯ ನಿಯಮಕ್ಕೆ ಭಂಗ ಬರುತ್ತಿರಲಿಲ್ಲ. ಒಂದು ಮಹೋಪಮೆಯನ್ನು ಬಳಸಿದ ಮೇಲೆ ಕವಿ "ಆದೊಡೇನ್ ಆ ಕನ್ಯೆಯಾತ್ಮವದಿತ್ತನಂತ ದಾರಿದ್ರ್ಯದೋಲ್". ಎಂದು ಗುರುವನ್ನು ತಂದು ಹೊಸ ಸೊಬಗನ್ನು ತಂದಿದ್ದಾರೆ. ಇದನ್ನು ಓದಿದಾಗ "ಆ" ಎಂಬ ನಿರ್ದೇಶಕ ಸರ್ವನಾಮದ ಸಾರ್ಥಕತೆ ತಿಳಿಯುತ್ತದೆ.

ಈ ಕಾವ್ಯದ ಛಂದಸ್ಸಿನ ಎಲ್ಲ ವೈವಿಧ್ಯಗಳನ್ನೂ ಇಲ್ಲಿ ನಿರೂಪಿಸುವುದು ಸಾಧ್ಯವಿಲ್ಲ. ನಿದರ್ಶನಕ್ಕಾಗಿ ಎರಡು ಪ್ರಯೋಗಗಳನ್ನು ಮಾತ್ರ ಇಲ್ಲಿ ಗುರುತಿಸಿದೆ. ಈ ಕಾವ್ಯದಲ್ಲಿ ಕಾಣುವ ಕವಿಯ ನೂತನ ಪ್ರಯೋಗಗಳು "ಶ್ರೀ ರಾಮಾಯಣ ದರ್ಶನಂ"

ಮಹಾಕಾವ್ಯದಲ್ಲಿ ಸಿದ್ಧಿಯಾಗಿ ಛಂದಸ್ಸಿನಲ್ಲಿ ಸಂಯಮ
ಮಾಧುರ್ಯ ಸ್ವಾತಂತ್ರ್ಯಗಳು ಕೂಡಿರುವುದನ್ನು ಸಂದರ್ಶಿ
ಬಹುದು.

**ಕವಿಯ ದರ್ಶನ:** ಕವಿ ತಮ್ಮ ಮುನ್ನುಡಿಯಲ್ಲಿ "
ಲಕ್ಸ್ಪ್ರೇಶನ ಕೃತಿಯಲ್ಲಿರುವಂತೆ ಅತಿಮಾನುಷ ಪೌರಾಣಿಕ
ಯಿಂದ ಪಾರಾಗುವ ಅನುಕೂಲವಿಲ್ಲ; ಠಾಕೂರರ ಕೃತಿಯ
ರುವಂತೆ ತಾರುಣ್ಯದ ಸಂಯಮರಹಿತ ವ್ರತಭ್ರಷ್ಟತೆಗೆ ಪ್ರಾ
ಶ್ಚಿತ್ತವಿಹೀನವಾದ ಭೋಗ ಕಿರೀಟವನ್ನಿಟ್ಟು ಪ್ರೇಮದ ಮ
ಖ್ಯಾತಿಯೆತ್ತುವುದಕ್ಕೂ ಸಾಧ್ಯವಾಗಿಲ್ಲ"—ಎಂದು ಹೇಳಿದ್ದಾ
ಈ ದರ್ಶನ, ಕಾವ್ಯದಲ್ಲಿ ಪ್ರಧಾನ ಶಕ್ತಿಯಾಗಿದೆ.

ಕವಿ ಕೆಲವು ವಿಶ್ವಶಕ್ತಿಗಳನ್ನು ಕುರಿತು ದರ್ಶನಾತ್ಮಕವಾ
ವಿವರಣೆಯನ್ನು ಕೊಡುತ್ತಾರೆ. "ರತಿ ಶಕ್ತಿ" ಅವರ ಕಾ
ಯಲ್ಲಿ ಹೀಗಿದೆ.

ಓ ಮಾಯೆ,
ಓ ರತಿಯೆ, ಓ ಕಲಾಸುಂದರಿಯೆ, ನಿರ್ಲಿಪ್ತ
ನಿಶ್ಚಿಂತ ನಿರ್ಗುಣ ಬ್ರಹ್ಮದಲಿ ಶಕ್ತಿಯುಂ
ಸೃಷ್ಟಿಯಾಸಕ್ತಿಯುಂ ಕೆರಳಿಸಿದ ಮೋಹಿನಿಯೆ,
ಪ್ರೇಮ ಸೌಂದರ್ಯ ರೂಪದಿ ಸುಳಿದು ವಿಶ್ವಮಂ
ಶುಷ್ಕತಾ ಶೂನ್ಯಕ್ಕೆ ಜಿಡದೆ ತೊರೆಯುವ ರಸವೆ,
ನಿನ್ನ ಬಂಧುರ ಬಂಧನಾಲಿಂಗನಕೆ ಸಿಲ್ಕಿ
ಶಶಿ ಸೂರ್ಯ ಗ್ರಹಗೋಳಿಸ್ಮ ತಾರೆಗಳೆ ನಡೆಯುತಿರೆ
ಪೆಸ್ಣೊ ವರ್ಗಳಂತಪ್ಪುದೊಂದು ಸೋಜಿಗವೆ ಪೇಳ್?"

—ಪು.

ಸೃಷ್ಟಿಯನ್ನು ಮುಂದುವರಿಸುತ್ತ ಆ ಶಕ್ತಿ ವಿಶ್ವವನ್ನು ವ್ಯಾಪಿಸಿದೆ. ಪ್ರಕೃತಿಯ ಸಮಸ್ತ ವ್ಯಾಪಾರಗಳಲ್ಲಿ ರತಿಶಕ್ತಿ ಗೋಚರವಾಗುವಂತೆ ಮನ್ಮಥಶಕ್ತಿಯೂ ವ್ಯಾಪಿಸಿದೆ.

"......ಹೇ ಅನಂಗನೆ, ನಿನಗೆ
ತನುವಿಲ್ಲದುದರಿಂದ ಸರ್ವತನು ತಾನಾಗಿ
ಜಗವನಾಳುತಿಹೆ, ನಿನ್ನಧಿಕಾರಕೆಡರಿಲ್ಲ.
ಸಾಗರತರಂಗಿಣಿಗಳಿಂದಭಿಷವಂಗೈದು,
ಕಾನನೋದ್ಯಾನ ನವ ಕುಸುಮಂಗಳಂ ಚೆಲ್ಲಿ
ಶುಕಪಿಕ ವಿಹಂಗ ಗೀತಾಂಜಲಿಯನರ್ಪಿಸುತೆ,
ಹೊಂಡಳಿಗೆಯಲಿ ಸಂಧ್ಯೆಯೋಕುಳಿಯನೆರಚುತ್ತೆ,
ಸ್ವರ್ಣೋಜ್ಜ್ವಲೋದಯದ ಮಂಗಳಾರತಿಯೆತ್ತಿ
ಪ್ರಕೃತಿದೇವಿಯೇ ತಾನು ರತಿಯ ರೂಪದಿ ನಿನ್ನ
ಪೂಜಿಸುವಳನುದಿನಂ! ಇಂತಿರಲ್ ತವ ಮಹಿಮೆ
ಪೇಳ್ ಅಬಲೆ ಚಿತ್ರಾಂಗಿ ತಾಂ ತಾಳಲಾಪಳೆ ನಿನ್ನ
ಭುವನ ಸಮ್ಮೋಹನ ಮಧುರ ಮೋಹನಾಸ್ತ್ರಮಂ?"

—ಪು. ೧೭

ಪ್ರಣಯಿನಿಯಾದ ಚಿತ್ರಾಂಗದೆಯಲ್ಲಿ ಅನುಕಂಪವನ್ನು ತೋರುವ ಕವಿಪ್ರತಿಭೆ ಸಮಸ್ತ ವಿಶ್ವವನ್ನು ವ್ಯಾಪಿಸಿರುವ ರತಿ ಮನ್ಮಥ ಶಕ್ತಿಗಳನ್ನು ಚಿತ್ರಿಸಿರುವ ರೀತಿ ಮನೋಜ್ಞವಾಗಿದೆ.

ಒಮ್ಮೊಮ್ಮೆ ಮಂತ್ರರೂಪದ ನುಡಿಗಳಲ್ಲಿ ಜೀವನ ತತ್ವವನ್ನು ಕವಿ ಹೇಳುವುದುಂಟು

"ಪ್ರಣಯ ಸಾಧನೆಗೆ ಶಿಶುವಾತ್ಸಲ್ಯ ತಾಂ ಸಿದ್ಧಿ !
..................................
....................ಹಸುಳೆಯೊಲ್ಮೆ ದಾಂಪತ್ಯ

ಮಂದಿರಕೆ ಗೋಪುರದ ಹೊಂಗಳಸಮಲ್ಲದೆಯೆ
ಗರ್ಭಗುಡಿಯಲಿ ಪುಣ್ಯವೇದಿಕೆಯ ದೇವಮೂರ್ತಿ!"

ಪು.— ೬೭

ಎಂಬ ಮಾತು ಅಂಬುಧಿಯ ಶ್ರೀಮೂರ್ತಿ ಚಿತ್ರಾಂಗದೆಗೆ ಹೇಳಿದುದು. ಇದು ಕವಿಯ ದರ್ಶನ. ಎಲ್ಲ ಪ್ರಣಯಿಗಳೂ ಅರಿಯಬೇಕಾದ ಗುರುತರವಾದ ತತ್ವವಿದು.

ಚಿತ್ರಾಂಗದೆ ತನ್ನನ್ನು ಸಮರ್ಪಿಸಿ ಪತಿಸುತರ ಶುಭಂಕರಿಯಾದ ಮಹಾತ್ಯಾಗದ ಚಿತ್ರ ಕಾವ್ಯದಲ್ಲಿ ಪ್ರಕಟವಾಗುವ ಹಿರಿಯ ತತ್ವ. ಕಾವ್ಯದ ಕಿರೀಟಪ್ರಾಯವಾದ ಈ ತತ್ವ ತನ್ನ ಬೆಳಕಿನಿಂದ ಸಮಸ್ತ ಕಾವ್ಯವನ್ನೂ ಬೆಳಗುತ್ತದೆ. ಇಂಥ ದರ್ಶನದಿಂದ ದೀಪ್ತವಾದ ಚಿತ್ರಾಂಗದಾ ಕಾವ್ಯ, ಕನ್ನಡ ಸಾಹಿತ್ಯದಲ್ಲಿ ಚಿರನೂತನವಾಗಿ ಬೆಳಗುವುದರಲ್ಲಿ ಸಂಶಯವಿಲ್ಲ. ಹೊಸಗನ್ನಡ ಸಾಹಿತ್ಯದಲ್ಲಿ ಚಿತ್ರಾಂಗದಾ ಕಾವ್ಯ ಮೂಡುವ ಮೊದಲು ದೀರ್ಘ ಕಾವ್ಯವನ್ನು ಸೃಜಿಸಿದ ಯಶಸ್ಸು ಶ್ರೀ ಕುವೆಂಪು ಅವರದು. ಈ ದೃಷ್ಟಿಯಿಂದಲೂ ಕಾವ್ಯದ ಉತ್ಕೃಷ್ಟತೆಯಿಂದಲೂ ಈ ಕಾವ್ಯಕ್ಕೆ ಹೊಸಗನ್ನಡ ಸಾಹಿತ್ಯದಲ್ಲಿ ಶ್ರೇಷ್ಠಸ್ಥಾನವಿದೆ.